KA / BG - GPO/ 2515 /WPP-47/ 2009 - 2011

# ಕರ್ನಾಟಕ ರಾಜ್ಯಪತ್ರ

**ಅಧಿಕೃತವಾಗಿ ಪ್ರಕಟಿಸಲಾದುದು**

**ವಿಶೇಷ ಪತ್ರಿಕೆ**

| ಭಾಗ – III | ಬೆಂಗಳೂರು, ಬುಧವಾರ, ಮಾರ್ಚ್ ೧೭, ೨೦೧೦ (ಫಾಲ್ಗುಣ ೨೬, ಶಕ ವರ್ಷ ೧೯೩೧) | ನಂ. ೨೬೪ |
|---|---|---|

**ರಾಜ್ಯ ಚುನಾವಣಾ ಆಯೋಗ, ಕರ್ನಾಟಕ**

ಕರ್ನಾಟಕ ರಾಜ್ಯ ಸಹಕಾರ ಮಾರಾಟ ಮಂಡಳಿ ಕಟ್ಟಡ (ಹಿಂಭಾಗ) 1ನೇ ಮಹಡಿ, ನಂ. 8, ಕನ್ನಿಂಗ್ ಹ್ಯಾಂ ರಸ್ತೆ, ಬೆಂಗಳೂರು – 52

**ಅಧಿಸೂಚನೆ**

**ಸಂ. ರಾಚುಆ : 1 : ಆರ್‌ಪಿಪಿ : 2009, ಬೆಂಗಳೂರು, ದಿನಾಂಕ : 15ನೇ ಮಾರ್ಚ್, 2010**

ರಾಜ್ಯ ಚುನಾವಣಾ ಆಯೋಗದ ಅಧಿಸೂಚನೆ ಸಂಖ್ಯೆ ರಾಚುಆ.02.ಆರ್‌ಪಿಪಿ.2004, ದಿನಾಂಕ : 10–05–2006 ರಲ್ಲಿ ಮಾನ್ಯತೆ ಪಡೆದ ರಾಷ್ಟ್ರೀಯ ಪಕ್ಷಗಳು, ರಾಜ್ಯ ಪಕ್ಷಗಳು, ನೊಂದಾಯಿತ ಮಾನ್ಯತೆ ಪಡೆಯದ ಪಕ್ಷಗಳು ಮತ್ತು ಮುಕ್ತ ಚಿಹ್ನೆಗಳನ್ನು ಕ್ರಮವಾಗಿ **ಕೋಷ್ಟಕ 1,2,3 ಮತ್ತು 4** ರಲ್ಲಿ ಅಧಿಸೂಚಿಸಿದೆ. ಸದರಿ ಅಧಿಸೂಚನೆಯ **ಕೋಷ್ಟಕ (3)** ರಲ್ಲಿ ಈ ಕೆಳಕಂಡ ಕ್ರಮ ಸಂಖ್ಯೆ ಮತ್ತು ಪಕ್ಷಗಳ ಹೆಸರನ್ನು ಸೇರ್ಪಡೆ ಮಾಡಲಾಗಿದೆ.

**ಕ್ರಮ ಸಂಖ್ಯೆ : 39. ರಾಣಿ ಚೆನ್ನಮ್ಮ ಪಾರ್ಟಿ**
**ಒಕ್ಕಲಗೇರಿ ಓಣಿ, ದ್ಯಾಮವ್ವನ ಕಟ್ಟಿ ಹತ್ತಿರ ಗದಗ – 582101**

**ಕ್ರಮ ಸಂಖ್ಯೆ : 40. ಪ್ರಜಾ ಭಾರತ್ ಪಾರ್ಟಿ**
**ನಂ. 32, ಎಂ.ಎಂ. ರಸ್ತೆ, ಫ್ರೇಜರ್ ಟೌನ್, ಬೆಂಗಳೂರು – 560005**

ಆದೇಶಾನುಸಾರ
**ಸಿ.ಆರ್. ರೇವಣ್ಣ**
ಅಧೀನ ಕಾರ್ಯದರ್ಶಿ
ರಾಜ್ಯ ಚುನಾವಣಾ ಆಯೋಗ, ಬೆಂಗಳೂರು

**ವಿಶೇಷ ಪತ್ರಿಕೆ**

| ಭಾಗ – III | ಬೆಂಗಳೂರು, ಗುರುವಾರ, ಮಾರ್ಚ್ ೧೮, ೨೦೧೦ (ಫಾಲ್ಗುಣ ೨೭, ಶಕ ವರ್ಷ ೧೯೩೧) | ನಂ. ೨೬೬ |
|---|---|---|

**OFFICE OF THE DEPUTY COMMISSIONER, BANGALORE URBAN DISTRICT, BANGALORE**

**NOTIFICATION**

**No. CEN.CR.05/09-10, Bangalore, Dated: 6th January, 2010**

In exercise of the powers delegated by Government in their Notification No.RD 20 ETC 2009 dated: 02-12-2009, the undersigned under sub-section (4) of Section 4 of the India Census Act, 1948 (Central Act No.37 of 1948) hereby appoints the Officers noted in col.3 as Nodal Officers with Designation noted in col.4 for the jurisdiction noted in col.5 of the table given below for the purpose of 2011 Census.

| Sl. No. | Administrative Unit | Designation | To be appointed as | Jurisdiction |
|---|---|---|---|---|
| 1 | Bangalore District | Sri. K.B. Sundar (Katti) K.A.S. Election Tahasildar, DCs Office, Bangalore District. B'lore. | Nodal Officer | Entire district excluding BBMP areas as notified in Notification No.UDD:92MNY: 2006 dated: 16-01-07 |

**H.RAMANJANEYA**
PRINCIPAL CENSUS OFFICER,
DEPUTY COMMISSIONER, BANGALORE (U) DISTRICT.

**NOTIFICATION**

**No. CEN.CR.05/09-10, Bangalore, Dated: 17th March, 2010**

In exercise of the powers delegated by Government in their Notification No. RD 20 ETC 2009 dated: 02-12-2009, the undersigned under sub-section(4) of Section 4 of the India Census Act, 1948 (Central Act No.37 of 1948) hereby appoints the Officers noted in Col.3 as Census Officers with Designation noted in Col.4 for the jurisdiction noted in Col.5 of the table given below for the purpose of 2011 Census.

| Sl. No. | Administrative Unit | Designation | To be appointed as | Jurisdiction |
|---|---|---|---|---|
| 1. | Bangalore North (Educational) District | Sri. T.C.Chandraiah, Deputy Director of Public Instruction, Bangalore North Dist., K.G. Road, Bangalore-9. | Assistant District Census Officer | Bangalore North Jurisdiction |
| 2. | Bangalore South (Educational) District | Sri. S.K.Channabasappa, Deputy Director of Public Instruction, Bangalore South Dist., Kalasipalyam, Bangalore-9. | Assistant District Census Officer | Bangalore South Jurisdiction |

**M.K. AIYAPPA**
PRINCIPAL CENSUS OFFICER
& DEPUTY COMMISSIONER,
BANGALORE DISTRICT

# ವಿಶೇಷ ಪತ್ರಿಕೆ

| ಭಾಗ – IV-A | ಬೆಂಗಳೂರು, ಗುರುವಾರ, ಮಾರ್ಚ್ ೧೮, ೨೦೧೦ (ಫಾಲ್ಗುಣ ೨೭, ಶಕ ವರ್ಷ ೧೯೩೧) | ನಂ. ೨೬೭ |
|---|---|---|

**KARNATAKA LEGISLATIVE ASSEMBLY SECRETARIAT**

**NOTIFICATION**

**No. KLA/LGA/50/Bill/2010, Bangalore, Dated : 18th March, 2010**

The following Bill was introduced in Legislative Assembly on 18th March, 2010.

**THE KARNATAKA APPROPRIATION (VOTE ON ACCOUNT) BILL, 2010**

**(L.A. Bill No. 8 of 2010)**

**ಕರ್ನಾಟಕ ವಿಧಾನ ಸಭೆ**
**ಹದಿಮೂರನೇ ವಿಧಾನಸಭೆ**
**ಐದನೇ ಅಧಿವೇಶನ**

**ಕರ್ನಾಟಕ ಧನವಿನಿಯೋಗ (ಲೇಖಾನುದಾನ) ವಿಧೇಯಕ, 2010**

**(2010ರ ವಿಧಾನಸಭೆಯ ವಿಧೇಯಕ ಸಂಖ್ಯೆ 8)**

2010–2011ನೇ ಹಣಕಾಸು ಭಾಗದ ವರ್ಷದ ಸೇವೆಗಳಿಗಾಗಿ ಕರ್ನಾಟಕ ರಾಜ್ಯದ ಸಂಚಿತ ನಿಧಿಯಿಂದ ಮತ್ತು ಅದರೊಳಗಿಂದ ಕೆಲವು ಮೊತ್ತಗಳ ಸಂದಾಯ ಮತ್ತು ವಿನಿಯೋಗಕ್ಕಾಗಿ ಅಧಿಕಾರ ನೀಡಲು ಒಂದು ವಿಧೇಯಕ.

2010–2011ನೇ ಹಣಕಾಸು ಭಾಗದ ವರ್ಷದ ಸೇವೆಗಳಿಗಾಗಿ ಕರ್ನಾಟಕ ರಾಜ್ಯದ ಸಂಚಿತ ನಿಧಿಯಿಂದ ಮತ್ತು ಆ ಪೈಕಿಯಿಂದ ಕೆಲವು ಮೊತ್ತಗಳ ಸಂದಾಯ ಮತ್ತು ವಿನಿಯೋಗಕ್ಕಾಗಿ ಅಧಿಕಾರ ನೀಡುವುದು ಯುಕ್ತವಾಗಿರುವುದರಿಂದ ;

ಇದು ಭಾರತ ಗಣರಾಜ್ಯದ ಅರವತ್ತೊಂದನೇ ವರ್ಷದಲ್ಲಿ ಕರ್ನಾಟಕ ರಾಜ್ಯ ವಿಧಾನ ಮಂಡಲದಿಂದ ಈ ಕೆಳಕಂಡಂತೆ ಅಧಿನಿಯಮವಾಗಲಿ.

**1. ಸಂಕ್ಷಿಪ್ತ ಹೆಸರು :–** ಈ ಅಧಿನಿಯಮವನ್ನು ಕರ್ನಾಟಕ ಧನವಿನಿಯೋಗ (ಲೇಖಾನುದಾನ) ಅಧಿನಿಯಮ, 2010 ಎಂದು ಕರೆಯತಕ್ಕದ್ದು.

**2. ಕರ್ನಾಟಕ ರಾಜ್ಯದ ಸಂಚಿತ ನಿಧಿಯಿಂದ 2010–2011ನೇ ಹಣಕಾಸು ಭಾಗದ ವರ್ಷಕ್ಕಾಗಿ 2399571.80 ಲಕ್ಷ ರೂಪಾಯಿಗಳ ನೀಡಿಕೆ :–** ಅನುಸೂಚಿಯ 2ನೇ ಅಂಕಣದಲ್ಲಿ ನಿರ್ದಿಷ್ಟ ಪಡಿಸಲಾದ ಸೇವೆಗಳ ಸಂಬಂಧದಲ್ಲಿ 2010–2011ನೇ ಹಣಕಾಸು ಭಾಗದ ವರ್ಷದಲ್ಲಿ ಸಂದಾಯ ಮಾಡುವಾಗ ಒದಗಿಬರುವ ಹಲವಾರು ಖರ್ಚುಗಳನ್ನು ವಹಿಸುವುದಕ್ಕಾಗಿ ಅನುಸೂಚಿಯ 5ನೇ ಅಂಕಣದಲ್ಲಿ ನಿರ್ದಿಷ್ಟಪಡಿಸಲಾಗಿರುವ ಇಪ್ಪತ್ಮೂರು ಸಾವಿರದ ಒಂಬೈನೂರ ತೊಂಭತ್ತೈದು ಕೋಟಿ

ಎಪ್ಪತ್ತೊಂದು ಲಕ್ಷದ ಎಂಭತ್ತು ಸಾವಿರ ರೂಪಾಯಿಗಳಿಗೆ ಮೀರದಷ್ಟು ಮೊಬಲಗನ್ನು ಮಾತ್ರ ಕರ್ನಾಟಕ ರಾಜ್ಯ ಸಂಚಿತ ನಿಧಿಯಿಂದ ಮತ್ತು ಅದರೊಳಗಿಂದ ಸಂದಾಯ ಮಾಡತಕ್ಕದ್ದು.

**3. ಧನವಿನಿಯೋಗ :–** ಈ ಅಧಿನಿಯಮದ ಮೂಲಕ, ಕರ್ನಾಟಕ ರಾಜ್ಯದ ಸಂಚಿತ ನಿಧಿಯಿಂದ ಮತ್ತು ಅದರೊಳಗಿಂದ ಸಂದಾಯ ಮಾಡಲು ಮತ್ತು ಉಪಯೋಗಿಸಲು ಅಧಿಕಾರ ನೀಡಲಾದ ಮೊತ್ತಗಳನ್ನು ಸದರಿ ವರ್ಷಕ್ಕೆ ಸಂಬಂಧಪಟ್ಟಂತೆ ಅನುಸೂಚಿಯಲ್ಲಿ ತಿಳಿಸಲಾದ ಸೇವೆಗಳು ಮತ್ತು ಉದ್ದೇಶಗಳಿಗಾಗಿ ವಿನಿಯೋಗಿಸತಕ್ಕದ್ದು.

**ಅನುಸೂಚಿ**

(2 ಮತ್ತು 3ನೇ ಪ್ರಕರಣಗಳನ್ನು ನೋಡಿ)

(ರೂ. ಲಕ್ಷಗಳಲ್ಲಿ)

| | | | ಮೀರದ ಮೊಬಲಗು | | |
|---|---|---|---|---|---|
| **ಬೇಡಿಕೆ ಸಂಖ್ಯೆ** | **ಸೇವೆಗಳು ಮತ್ತು ಉದ್ದೇಶಗಳು** | | **ವಿಧಾನಸಭೆಯಿಂದ ಪುರಸ್ಕೃತವಾದುದನ್ನು** | **ಸಂಚಿತನಿಧಿಯಿಂದ ಪ್ರಭೃತವಾದುದನ್ನು** | **ಒಟ್ಟು** |
| **1** | **2** | | **3** | **4** | **5** |
| 01 | ಕೃಷಿ ಮತ್ತು ತೋಟಗಾರಿಕೆ | ರಾಜಸ್ವ | 68784.51 | 8.21 | 68792.72 |
| | | ಬಂಡವಾಳ | 2604.56 | - | 2604.56 |
| 02 | ಪಶು ಸಂಗೋಪನೆ ಮತ್ತು ಮೀನುಗಾರಿಕೆ | ರಾಜಸ್ವ | 26613.16 | - | 26613.16 |
| | | ಬಂಡವಾಳ | 2950.38 | - | 2950.38 |
| 03 | ಆರ್ಥಿಕ | ರಾಜಸ್ವ | 204064.72 | 5.00 | 204069.72 |
| | | ಬಂಡವಾಳ | 1167.83 | - | 1167.83 |
| 04 | ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ | ರಾಜಸ್ವ | 10385.37 | 3158.63 | 13544.00 |
| | | ಬಂಡವಾಳ | - | - | - |
| 05 | ಒಳಾಡಳಿತ ಮತ್ತು ಸಾರಿಗೆ | ರಾಜಸ್ವ | 80441.79 | - | 80441.79 |
| | | ಬಂಡವಾಳ | 13530.29 | - | 13530.29 |
| 06 | ಮೂಲಭೂತ ಸೌಕರ್ಯ | ರಾಜಸ್ವ | 330.77 | - | 330.77 |
| | | ಬಂಡವಾಳ | 22654.99 | - | 22654.99 |
| 07 | ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತಿ ರಾಜ್ | ರಾಜಸ್ವ | 69705.20 | - | 69705.20 |
| | | ಬಂಡವಾಳ | 48842.44 | - | 48842.44 |
| 08 | ಅರಣ್ಯ, ಜೀವಿಶಾಸ್ತ್ರ ಮತ್ತು ಪರಿಸರ | ರಾಜಸ್ವ | 18429.38 | 3001.68 | 21431.06 |
| | | ಬಂಡವಾಳ | 133.00 | - | 133.00 |
| 09 | ಸಹಕಾರ | ರಾಜಸ್ವ | 13849.16 | - | 13849.16 |
| | | ಬಂಡವಾಳ | 446.17 | - | 446.17 |
| 10 | ಸಮಾಜ ಕಲ್ಯಾಣ | ರಾಜಸ್ವ | 79644.66 | - | 79644.66 |
| | | ಬಂಡವಾಳ | 9296.81 | - | 9296.81 |
| 11 | ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ | ರಾಜಸ್ವ | 57109.52 | - | 57109-52 |
| | | ಬಂಡವಾಳ | 49901.01 | - | 49901.01 |
| 12 | ವಾರ್ತಾ, ಪ್ರವಾಸೋದ್ಯಮ ಮತ್ತು ಯುವಜನ ಸೇವೆಗಳು | ರಾಜಸ್ವ | 7606.56 | - | 7606.56 |
| | | ಬಂಡವಾಳ | 4595.40 | - | 4595.40 |

| 1 | 2 | | 3 | 4 | 5 |
|---|---|---|---|---|---|
| 13 | ಆಹಾರ ಮತ್ತು ನಾಗರೀಕ ಸರಬರಾಜು | ರಾಜಸ್ವ | 30541.65 | 0.90 | 30542.55 |
| | | ಬಂಡವಾಳ | 599.40 | - | 599.40 |
| 14 | ಕಂದಾಯ | ರಾಜಸ್ವ | 90506.15 | - | 90506.15 |
| | | ಬಂಡವಾಳ | 6901.36 | - | 6901.36 |
| 15 | ಮಾಹಿತಿ ತಂತ್ರಜ್ಞಾನ | ರಾಜಸ್ವ | 2589.11 | - | 2589.11 |
| | | ಬಂಡವಾಳ | 507.83 | - | 507.83 |
| 16 | ವಸತಿ | ರಾಜಸ್ವ | 29237.43 | - | 29237.43 |
| | | ಬಂಡವಾಳ | 4153.30 | - | 4153.30 |
| 17 | ಶಿಕ್ಷಣ | ರಾಜಸ್ವ | 343985.41 | - | 343985.41 |
| | | ಬಂಡವಾಳ | 9305.35 | - | 9305.35 |
| 18 | ವಾಣಿಜ್ಯ ಮತ್ತು ಕೈಗಾರಿಕೆ | ರಾಜಸ್ವ | 33840.92 | 0.09 | 33841.01 |
| | | ಬಂಡವಾಳ | 3507.24 | - | 3507.24 |
| 19 | ನಗರಾಭಿವೃದ್ಧಿ | ರಾಜಸ್ವ | 151561.25 | - | 151561.25 |
| | | ಬಂಡವಾಳ | 50299.65 | - | 50299.65 |
| 20 | ಲೋಕೋಪಯೋಗಿ | ರಾಜಸ್ವ | 43673.30 | - | 43673.30 |
| | | ಬಂಡವಾಳ | 68282.45 | - | 68282.45 |
| 21 | ಜಲಸಂಪನ್ಮೂಲ | ರಾಜಸ್ವ | 13321.09 | - | 13321.09 |
| | | ಬಂಡವಾಳ | 168507.87 | - | 168507.87 |
| 22 | ಆರೋಗ್ಯ ಮತ್ತು ಕುಟುಂಬ ಕಲ್ಯಾಣ | ರಾಜಸ್ವ | 75738.12 | - | 75738.12 |
| | ಸೇವೆಗಳು | ಬಂಡವಾಳ | 13464.19 | - | 13464.19 |
| 23 | ಕಾರ್ಮಿಕ | ರಾಜಸ್ವ | 15354.46 | - | 15354.46 |
| | | ಬಂಡವಾಳ | 499.50 | - | 499.50 |
| 24 | ಇಂಧನ | ರಾಜಸ್ವ | 95396.43 | 70.93 | 95467.36 |
| | | ಬಂಡವಾಳ | 22633.01 | - | 22633.01 |
| 25 | ಕನ್ನಡ ಮತ್ತು ಸಂಸ್ಕೃತಿ | ರಾಜಸ್ವ | 6737.79 | - | 6737.79 |
| | | ಬಂಡವಾಳ | 699.63 | - | 699.63 |
| 26 | ಯೋಜನೆ, ಸಾಂಖ್ಯಿಕ ಹಾಗೂ ವಿಜ್ಞಾನ | ರಾಜಸ್ವ | 2062.12 | - | 2062.12 |
| | ಮತ್ತು ತಂತ್ರಜ್ಞಾನ | ಬಂಡವಾಳ | 8215.11 | - | 8215.11 |
| 27 | ಕಾನೂನು | ರಾಜಸ್ವ | 12483.32 | - | 12483.32 |
| | | ಬಂಡವಾಳ | 299.70 | - | 299.70 |
| 28 | ಸಂಸದೀಯ ವ್ಯವಹಾರಗಳು ಮತ್ತು | ರಾಜಸ್ವ | 2902.27 | 51.24 | 2953.51 |
| | ಶಾಸನ ರಚನೆ | ಬಂಡವಾಳ | - | - | - |
| 29 | ಋಣ ಮೇಲುಸ್ತುವಾರಿ | ರಾಜಸ್ವ | - | 210322.80 | 210322.80 |
| | | ಬಂಡವಾಳ | - | 126969.24 | 126969.24 |
| | **ಒಟ್ಟು** | | **2055983.09** | **343588.71** | **2399571.80** |

**ಉದ್ದೇಶಗಳು ಮತ್ತು ಕಾರಣಗಳ ಹೇಳಿಕೆ**

2010–2011ನೇ ಹಣಕಾಸು ಭಾಗದ ವರ್ಷದಲ್ಲಿ ಸಂದಾಯ ಮಾಡುವಾಗ ಒದಗಿಬರುವ ಹಲವಾರು ಖರ್ಚುಗಳನ್ನು ವಹಿಸುವುದಕ್ಕಾಗಿ ರಾಜ್ಯದ ಸಂಚಿತ ನಿಧಿಯೊಳಗಿನಿಂದ ವಿನಿಯೋಗಿಸಲು ಭಾರತ ಸಂವಿಧಾನದ 204ನೇ ಅನುಚ್ಛೇದದ ಉಪಬಂಧಗಳಿಗನುಸಾರವಾಗಿ ಈ ವಿಧೇಯಕವನ್ನು ಮಂಡಿಸಲಾಗಿದೆ.

**ಬಿ.ಎಸ್. ಯಡಿಯೂರಪ್ಪ**
ಮುಖ್ಯಮಂತ್ರಿಗಳು ಹಾಗೂ
ಹಣಕಾಸು ಸಚಿವರು

**ಎಸ್.ಬಿ. ಪಾಟೀಲ್**
ಕಾರ್ಯದರ್ಶಿ, ಕರ್ನಾಟಕ ವಿಧಾನ ಸಭೆ

**KARNATAKA LEGISLATIVE ASSEMBLY**

**THIRTEENTH LEGISLATIVE ASSEMBLY**

**FIFTH SESSION**

**THE KARNATAKA APPROPRIATION (VOTE ON ACCOUNT) BILL, 2010**

**(L.A. Bill No. 8 of 2010)**

A Bill to authorize payment and appropriation of certain sums from and out of the Consolidated Fund of the State of Karnataka for the Services for the part of the Financial Year 2010-2011.

Whereas it is expedient to authorize payment and appropriation of certain further sums from and out of the Consolidated Fund of the State for the services of the part of the Financial Year 2010-2011.

Be it enacted by the Karnataka State Legislature in the Sixty First Year of the Republic of India as follows :-

**1. Short Title :** This Act may be called the Karnataka Appropriation (Vote on Account) Act, 2010.

**2. Issue of Rupees 2399571.80 Lakhs out of the Consolidated Fund of the State of Karnataka for the part of the Financial year 2010-2011.** From and out of the Consolidated Fund of the State of Karnataka, there may be paid and applied sums not exceeding those specified in column 5 of the Schedule amounting in the aggregate to the sum of **Rupees Twenty three thousand nine hundred ninety five crores seventy one lakhs eighty thousand only** towards defraying the several charges which will come in the course of payment during the part of the Financial Year 2010-2011 in respect of the services specified in column 2 of the Schedule.

**3. Appropriation :-** The sums authorized to be paid and applied from and out of the Consolidated Fund of the State by this Act shall be appropriated for the services and purposes expressed in the Schedule in relation to the said year.

**SCHEDULE**

*(See Sections 2 and 3)*

(Rs. in Lakhs)

| | | | Sums not exceeding | | |
|---|---|---|---|---|---|
| **Dem and No.** | **Service & Purpose** | | **Voted by the Legislative Assembly** | **Charged on the Consolidated Fund** | **Total** |
| **1** | **2** | | **3** | **4** | **5** |
| 01 | Agriculture & Horticulture | Revenue | 68784.51 | 8.21 | 68792.72 |
| | | Capital | 2604.56 | - | 2604.56 |
| 02 | Animal Husbandry & Fisheries | Revenue | 26613.16 | - | 26613.16 |
| | | Capital | 2950.38 | - | 2950.38 |
| 03 | Finance | Revenue | 204064.72 | 5.00 | 204069.72 |
| | | Capital | 1167.83 | - | 1167.83 |

| 1 | 2 | | 3 | 4 | 5 |
|---|---|---|---|---|---|
| 04 | Department of Personnel & Administrative Reforms | Revenue | 10385.37 | 3158.63 | 13544.00 |
| | | Capital | - | - | - |
| 05 | Home and Transport | Revenue | 80441.79 | - | 80441.79 |
| | | Capital | 13530.29 | - | 13530.29 |
| 06 | Infrastructure Development | Revenue | 330.77 | - | 330.77 |
| | | Capital | 22654.99 | - | 22654.99 |
| 07 | Rural Development & Panchayat Raj | Revenue | 69705.20 | - | 69705.20 |
| | | Capital | 48842.44 | - | 48842.44 |
| 08 | Forest, Ecology & Environment | Revenue | 18429.38 | 3001.68 | 21431.06 |
| | | Capital | 133.00 | - | 133.00 |
| 09 | Co-operation | Revenue | 13849.16 | - | 13849.16 |
| | | Capital | 446.17 | - | 446.17 |
| 10 | Social Welfare | Revenue | 79644.66 | - | 79644.66 |
| | | Capital | 9296.81 | - | 9296.81 |
| 11 | Women & Child Development | Revenue | 57109.52 | - | 57109-52 |
| | | Capital | 49901.01 | - | 49901.01 |
| 12 | Information, Tourism & Youth Services | Revenue | 7606.56 | - | 7606.56 |
| | | Capital | 4595.40 | - | 4595.40 |
| 13 | Food and Civil Supplies | Revenue | 30541.65 | 0.90 | 30542.55 |
| | | Capital | 599.40 | - | 599.40 |
| 14 | Revenue | Revenue | 90506.15 | - | 90506.15 |
| | | Capital | 6901.36 | - | 6901.36 |
| 15 | Information Technology | Revenue | 2589.11 | - | 2589.11 |
| | | Capital | 507.83 | - | 507.83 |
| 16 | Housing | Revenue | 29237.43 | - | 29237.43 |
| | | Capital | 4153.30 | - | 4153.30 |
| 17 | Education | Revenue | 343985.41 | - | 343985.41 |
| | | Capital | 9305.35 | - | 9305.35 |
| 18 | Commerce & Industries | Revenue | 33840.92 | 0.09 | 33841.01 |
| | | Capital | 3507.24 | - | 3507.24 |
| 19 | Urban Development | Revenue | 151561.25 | - | 151561.25 |
| | | Capital | 50299.65 | - | 50299.65 |
| 20 | Public Works | Revenue | 43673.30 | - | 43673.30 |
| | | Capital | 68282.45 | - | 68282.45 |
| 21 | Water Resources | Revenue | 13321.09 | - | 13321.09 |
| | | Capital | 168507.87 | - | 168507.87 |
| 22 | Health and Family Welfare | Revenue | 75738.12 | - | 75738.12 |
| | | Capital | 13464.19 | - | 13464.19 |

| 1 | 2 | | 3 | 4 | 5 |
|---|---|---|---|---|---|
| 23 | Labour | Revenue | 15354.46 | - | 15354.46 |
| | | Capital | 499.50 | - | 499.50 |
| 24 | Energy | Revenue | 95396.43 | 70.93 | 95467.36 |
| | | Capital | 22633.01 | - | 22633.01 |
| 25 | Kannada and Culture | Revenue | 6737.79 | - | 6737.79 |
| | | Capital | 699.63 | - | 699.63 |
| 26 | Planning, Statistics, Science & Technology | Revenue | 2062.12 | - | 2062.12 |
| | | Capital | 8215.11 | - | 8215.11 |
| 27 | Law | Revenue | 12483.32 | - | 12483.32 |
| | | Capital | 299.70 | - | 299.70 |
| 28 | Parliamentary Affairs & Legislation | Revenue | 2902.27 | 51.24 | 2953.51 |
| | | Capital | - | - | - |
| 29 | Debt Servicing | Revenue | - | 210322.80 | 210322.80 |
| | | Capital | - | 126969.24 | 126969.24 |
| | Total | | 2055983.09 | 343588.71 | 2399571.80 |

**STATEMENT OF OBJECTS AND REASONS**

This Bill is introduced in pursuance of the provisions of Article 204 of the Constitution of India to provide for the appropriation out of the Consolidated Fund of the State towards defraying the several charges which will come in course of payment during the part of the Financial Year 2010-2011.

**B.S. YEDDYURAPPA**
Chief Minister and
Minister for Finance

**S.B. PATIL**
Secretary
Karnataka Legislative Assembly

**S.B. PATIL**
Secretary, Karnataka Legislative Assembly

# ವಿಶೇಷ ಪತ್ರಿಕೆ

| ಭಾಗ – IV-A | ಬೆಂಗಳೂರು, ಗುರುವಾರ, ಮಾರ್ಚ್ ೧೮, ೨೦೧೦ (ಫಾಲ್ಗುಣ ೨೭, ಶಕ ವರ್ಷ ೧೯೩೧) | ನಂ. ೨೬೮ |
|---|---|---|

**KARNATAKA LEGISLATIVE ASSEMBLY SECRETARIAT**

**NOTIFICATION**

**No. KLA/LGA/52/Bill/2010, Bangalore, Dated : 18th March, 2010**

The following Bill was introduced in Legislative Assembly on 18th March, 2010.

**THE KARNATAKA TAXATION LAWS (AMENDMENT) BILL, 2010**

**(L.A. Bill No. 9 of 2010)**

**ಕರ್ನಾಟಕ ವಿಧಾನ ಸಭೆ**

**ಹದಿಮೂರನೇ ವಿಧಾನಸಭೆ**

**ಐದನೇ ಅಧಿವೇಶನ**

**ಕರ್ನಾಟಕ ತೆರಿಗೆ ಕಾನೂನುಗಳ (ತಿದ್ದುಪಡಿ) ವಿಧೇಯಕ, 2010**

**(2010ರ ವಿಧಾನಸಭೆಯ ವಿಧೇಯಕ ಸಂಖ್ಯೆ 9)**

ಕರ್ನಾಟಕ ರಾಜ್ಯದಲ್ಲಿ ಜಾರಿಯಲ್ಲಿರುವ ಕೆಲವು ತೆರಿಗೆ ಕಾನೂನುಗಳನ್ನು ಮತ್ತಷ್ಟು ತಿದ್ದುಪಡಿ ಮಾಡಲು ಒಂದು ವಿಧೇಯಕ.

ಇಲ್ಲಿ ಇನ್ನು ಮುಂದೆ ಕಂಡುಬರುವ ಉದ್ದೇಶಗಳಿಗಾಗಿ ಕೆಲವು ತೆರಿಗೆ ಕಾನೂನುಗಳನ್ನು ಮತ್ತಷ್ಟು ತಿದ್ದುಪಡಿ ಮಾಡುವುದು ಯುಕ್ತವಾಗಿರುವುದರಿಂದ;

ಇದು ಭಾರತ ಗಣರಾಜ್ಯದ ಅರವತ್ತೊಂದನೇ ವರ್ಷದಲ್ಲಿ ಕರ್ನಾಟಕ ರಾಜ್ಯ ವಿಧಾನಮಂಡಲದಿಂದ ಈ ಮುಂದಿನಂತೆ ಅಧಿನಿಯಮಿತವಾಗಲಿ, ಎಂದರೆ:-

**1. ಸಂಕ್ಷಿಪ್ತ, ಹೆಸರು ಮತ್ತು ಪ್ರಾರಂಭ.- (1) ಈ ಅಧಿನಿಯಮವನ್ನು ಕರ್ನಾಟಕ ತೆರಿಗೆ ಕಾನೂನುಗಳ (ತಿದ್ದುಪಡಿ) ಅಧಿನಿಯಮ, 2010** ಎಂದು ಕರೆಯತಕ್ಕದ್ದು.

(2) ಇದು 2010ರ ಏಪ್ರಿಲ್ ಒಂದನೇ ದಿನಾಂಕದಿಂದ ಜಾರಿಗೆ ಬರತಕ್ಕದ್ದು.

**2. 1957ರ ಕರ್ನಾಟಕ ಅಧಿನಿಯಮ 25ರ ತಿದ್ದುಪಡಿ.-** ಕರ್ನಾಟಕ ಮಾರಾಟ ತೆರಿಗೆ ಅಧಿನಿಯಮ, 1957ರಲ್ಲಿ (1957ರ ಕರ್ನಾಟಕ ಅಧಿನಿಯಮ 25),-

(1) 2ನೇ ಪ್ರಕರಣದ, (1)ನೇ ಉಪಪ್ರಕರಣದಲ್ಲಿ,

(ಎ) (ಕೆ) ಖಂಡದಲ್ಲಿ, (vi)ನೇ ಉಪ ಖಂಡದ ತರುವಾಯ, ಈ ಮುಂದಿನ ಉಪ ಖಂಡವನ್ನು 1983ರ ಫೆಬ್ರವರಿ ಎರಡನೇ ದಿನದಿಂದ ಜಾರಿಗೆ ಬರುವಂತೆ ಸೇರಿಸತಕ್ಕದ್ದು ಹಾಗೂ ಹಾಗೆ ಸೇರಿಸಲಾಗಿದೆ ಎಂದು ಭಾವಿಸತಕ್ಕದ್ದು, ಎಂದರೆ:-

"(vi-1) ನಗದಿಗಾಗಿ, ಮುಂದಕ್ಕೆ ಹಾಕಲಾದ ಸಂದಾಯಕ್ಕಾಗಿ ಅಥವಾ ಇತರ ಬೆಲೆಯುಳ್ಳ ಪ್ರತಿಫಲಕ್ಕಾಗಿ ತನ್ನ ಸದಸ್ಯರಿಗೆ ಸರಕುಗಳನ್ನು ಸರಬರಾಜು ಮಾಡುವ ನಿಗಮಿತವಲ್ಲದ ಸಂಘ ಅಥವಾ ವ್ಯಕ್ತಿಗಳ ನಿಕಾಯ;"

(ಬಿ) (ಟಿ) ಖಂಡದಲ್ಲಿ,

(i) (iv) ನೇ ಉಪಖಂಡದ ತರುವಾಯ, ಈ ಮುಂದಿನದನ್ನು 1983ರ ಫೆಬ್ರವರಿ ಎರಡನೇ ದಿನದಿಂದ ಜಾರಿಗೆ ಬರುವಂತೆ ಸೇರಿಸತಕ್ಕದ್ದು ಮತ್ತು ಹಾಗೆ ಸೇರಿಸಲಾಗಿದೆ ಎಂದು ಭಾವಿಸತಕ್ಕದ್ದು, ಎಂದರೆ:-

"(v) ಯಾವುದೇ ನಿಗಮಿತವಲ್ಲದ ಸಂಘ ಅಥವಾ ವ್ಯಕ್ತಿಗಳ ನಿಕಾಯವು ಅದರ ಒಬ್ಬ ಸದಸ್ಯನಿಗೆ ನಗದಿಗಾಗಿ, ಮುಂದಕ್ಕೆ ಹಾಕಲಾದ ಸಂದಾಯಕ್ಕಾಗಿ ಅಥವಾ ಇತರ ಬೆಲೆಯುಳ್ಳ ಪ್ರತಿಫಲಕ್ಕಾಗಿ ಸರಕುಗಳ ಸರಬರಾಜು;

(vi) ಯಾವುದೇ ಸೇವೆಯ ರೂಪದಲ್ಲಿ ಅಥವಾ ಅದರ ಭಾಗವಾಗಿ ಅಥವಾ ಯಾವುದೇ ಇತರ ರೀತಿಯಲ್ಲಿ, ಮಾನವನ ಬಳಕೆಗಾಗಿನ ಆಹಾರ ಅಥವಾ ಯಾವುದೇ ಇತರ ವಸ್ತು ಅಥವಾ ಯಾವುದೇ ಪಾನೀಯದ (ಮಾದಕ ಪಾನೀಯವಾಗಿರಲಿ ಅಥವಾ ಆಗಿಲ್ಲದಿರಲಿ), ಸರಬರಾಜು, ಅಂಥ ಸರಬರಾಜು ಅಥವಾ ಸೇವೆಯು ನಗದಿಗಾಗಿ, ಮುಂದಕ್ಕೆ ಹಾಕಲಾದ ಸಂದಾಯಕ್ಕಾಗಿ ಅಥವಾ ಇತರ ಬೆಲೆಯುಳ್ಳ ಪ್ರತಿಫಲಕ್ಕಾಗಿ ಆಗಿದ್ದಲ್ಲಿ, ಮತ್ತು ಆ ಸರಕುಗಳ ವರ್ಗಾವಣೆ, ಬಟವಾಡೆ ಅಥವಾ ಸರಬರಾಜು ಮಾಡುವ ವ್ಯಕ್ತಿಯು ಮಾಡಿದ ಅಂಥ ಯಾವುವೇ ಸರಕುಗಳ ವರ್ಗಾವಣೆ, ಬಟವಾಡೆ ಅಥವಾ ಸರಬರಾಜನ್ನು, ಮತ್ತು ಆ ಸರಕುಗಳು ಯಾರಿಗೆ ವರ್ಗಾವಣೆ, ಬಟವಾಡೆ ಅಥವಾ ಸರಬರಾಜು ಮಾಡಲಾಗಿದೆಯೋ ಆ ವ್ಯಕ್ತಿಯು ಮಾಡಿದ ಖರೀದಿಯನ್ನು ಮಾರಾಟವೆಂದು ಭಾವಿಸತಕ್ಕದ್ದು."

(ii) **ವಿವರಣೆ** 3-ಎ ಅನ್ನು 1983ರ ಫೆಬ್ರವರಿ ಎರಡನೇ ದಿನದಿಂದ ಜಾರಿಗೆ ಬರುವಂತೆ ಬಿಟ್ಟುಬಿಡತಕ್ಕದ್ದು ಹಾಗೂ ಹಾಗೆ ಬಿಟ್ಟುಬಿಡಲಾಗಿದೆ ಎಂದು ಭಾವಿಸತಕ್ಕದ್ದು.

(2) 12ನೇ ಪ್ರಕರಣದಲ್ಲಿ,

(ಎ) (1)ನೇ ಉಪಪ್ರಕರಣದಲ್ಲಿ ಈ ಮುಂದಿನ ಪರಂತುಕವನ್ನು ಸೇರಿಸತಕ್ಕದ್ದು, ಎಂದರೆ:-

"ಪರಂತು, ಆಯುಕ್ತರು ಅಧಿಸೂಚಿಸಬಹುದಾದ ವ್ಯಾಪಾರಿಗಳ ನಿರ್ದಿಷ್ಟ ವರ್ಗವು, (1)ನೇ ಉಪಪ್ರಕರಣದಡಿಯಲ್ಲಿಯ ವಿವರಪಟ್ಟಿಯ (ರಿಟರ್ನ್) ಆಧಾರದ ಮೇಲೆ ಪಾವತಿಸಬೇಕಾದ ತೆರಿಗೆಯನ್ನು, ಸದರಿ ಅಧಿಸೂಚನೆಯಲ್ಲಿ ನಿರ್ದಿಷ್ಟಪಡಿಸಿದ ರೀತಿಯಲ್ಲಿ ವಿದ್ಯುನ್ಮಾನ ವಿಧಾನದಲ್ಲಿ ಅಂತರ್ಜಾಲದ ಮೂಲಕ ಸಂದಾಯ ಮಾಡತಕ್ಕದ್ದು."

(ಬಿ) (1-ಎ) ಉಪಪ್ರಕರಣದಲ್ಲಿ, ಈ ಮುಂದಿನ ಪರಂತುಕವನ್ನು ಸೇರಿಸತಕ್ಕದ್ದು, ಎಂದರೆ:-

"ಪರಂತು, ಆಯುಕ್ತರು ಅಧಿಸೂಚಿಸಬಹುದಾದ ವ್ಯಾಪಾರಿಗಳ ನಿರ್ದಿಷ್ಟ ವರ್ಗವು, (1)ನೇ ಉಪಪ್ರಕರಣದಡಿಯಲ್ಲಿಯ ವಿವರ ಪಟ್ಟಿಯ ಆಧಾರದ ಮೇಲೆ ಸಂದಾಯ ಮಾಡಬೇಕಾದ ತೆರಿಗೆಯನ್ನು, ವಿದ್ಯುನ್ಮಾನ ವಿಧಾನದಲ್ಲಿ ಅಂತರ್ಜಾಲದ ಮೂಲಕ, ಸದರಿ ಅಧಿಸೂಚನೆಯಲ್ಲಿ ನಿರ್ದಿಷ್ಟಪಡಿಸಿದ ರೀತಿಯಲ್ಲಿ, ಸಂದಾಯ ಮಾಡತಕ್ಕದ್ದು."

(3) 12–ಬಿ ಪ್ರಕರಣದಲ್ಲಿ, (1)ನೇ ಉಪಪ್ರಕರಣದಲ್ಲಿ ನಾಲ್ಕನೇ ಪರಂತುಕದ ತರುವಾಯ, ಈ ಮುಂದಿನ ಪರಂತುಕವನ್ನು ಸೇರಿಸತಕ್ಕದ್ದು, ಎಂದರೆ:–

"ಮತ್ತೂ ಪರಂತು, ಆಯುಕ್ತರು ಅಧಿಸೂಚಿಸಬಹುದಾದ ವ್ಯಾಪಾರಿಗಳ ನಿರ್ದಿಷ್ಟ ವರ್ಗವು, ನಿಯಮಿಸಿದ ನಮೂನೆಯಲ್ಲಿ ವಿವರಣ ಪಟ್ಟಿಯನ್ನು ವಿದ್ಯುನ್ಮಾನ ವಿಧಾನದಲ್ಲಿ ಅಂತರ್ಜಾಲದ ಮೂಲಕ ಸಲ್ಲಿಸತಕ್ಕದ್ದು ಮತ್ತು ವಿವರಣ ಪಟ್ಟಿಯ ಆಧಾರದ ಮೇಲೆ ಸಂದಾಯ ಮಾಡತಕ್ಕ ತೆರಿಗೆಯನ್ನು, ಸದರಿ ಅಧಿಸೂಚನೆಯಲ್ಲಿ ನಿರ್ದಿಷ್ಟಪಡಿಸಿದ ರೀತಿಯಲ್ಲಿ ವಿದ್ಯುನ್ಮಾನ ವಿಧಾನದಲ್ಲಿ ಅಂತರ್ಜಾಲದ ಮೂಲಕ ಜಮೆ ಮಾಡತಕ್ಕದ್ದು."

(4) 13ನೇ ಪ್ರಕರಣದಲ್ಲಿ, (1)ನೇ ಉಪಪ್ರಕರಣದಲ್ಲಿ, ಪರಂತುಕದ ತರುವಾಯ ಈ ಮುಂದಿನ ಪರಂತುಕವನ್ನು ಸೇರಿಸತಕ್ಕದ್ದು. ಎಂದರೆ:–

"ಮತ್ತು ಪರಂತು ಆಯುಕ್ತರು ಅಧಿಸೂಚಿಸಬಹುದಾದ ವ್ಯಾಪಾರಿಗಳ ನಿರ್ದಿಷ್ಟ ವರ್ಗವು, ಈ ಅಧಿನಿಯಮದ ಅಡಿಯಲ್ಲಿ ಬಾಕಿಯಿರುವ ತೆರಿಗೆ ಅಥವಾ ಯಾವುದೇ ಇತರ ಮೊತ್ತವನ್ನು ಸದರಿ ಅಧಿಸೂಚನೆಯಲ್ಲಿ ನಿರ್ದಿಷ್ಟಪಡಿಸಲಾದ ರೀತಿಯಲ್ಲಿ ವಿದ್ಯುನ್ಮಾನ ವಿಧಾನದಲ್ಲಿ ಅಂತರ್ಜಾಲದ ಮೂಲಕ ಜಮೆ ಮಾಡತಕ್ಕದ್ದು."

(5) 25–ಬಿ ಪ್ರಕರಣದಲ್ಲಿ,

(ಎ) (3)ನೇ ಉಪಪ್ರಕರಣದಲ್ಲಿ, ಈ ಮುಂದಿನ ಪರಂತುಕವನ್ನು ಸೇರಿಸತಕ್ಕದ್ದು, ಎಂದರೆ:–

"ಪರಂತು, ಆಯುಕ್ತರು ಅಧಿಸೂಚಿಸಬಹುದಾದ ವ್ಯಾಪಾರಿಗಳ ನಿರ್ದಿಷ್ಟ ವರ್ಗವು, ನಿಯಮಿಸಲಾದ ನಮೂನೆಯಲ್ಲಿ ವಿವರಪಟ್ಟಿಯನ್ನು, ಸದರಿ ಅಧಿಸೂಚನೆಯಲ್ಲಿ ನಿರ್ದಿಷ್ಟಪಡಿಸಿದ ರೀತಿಯಲ್ಲಿ ವಿದ್ಯುನ್ಮಾನ ವಿಧಾನದಲ್ಲಿ ಅಂತರ್ಜಾಲದ ಮೂಲಕ ಸಲ್ಲಿಸತಕ್ಕದ್ದು."

(ಬಿ) (4)ನೇ ಉಪಪ್ರಕರಣದಲ್ಲಿ, ಈ ಮುಂದಿನ ಪರಂತುಕವನ್ನು ಸೇರಿಸತಕ್ಕದ್ದು, ಎಂದರೆ:–

"ಪರಂತು ಆಯುಕ್ತರು ಅಧಿಸೂಚಿಸಬಹುದಾದ ವ್ಯಾಪಾರಿಗಳ ನಿರ್ದಿಷ್ಟ ವರ್ಗವು, (1)ನೇ ಉಪಪ್ರಕರಣದಡಿಯಲ್ಲಿ ಪಾವತಿಸಬೇಕಾದ ತೆರಿಗೆಯನ್ನು ಸಂದಾಯ ಮಾಡತಕ್ಕದ್ದು ಮತ್ತು (2)ನೇ ಉಪಪ್ರಕರಣದಡಿಯಲ್ಲಿ ಪಾವತಿಸಬೇಕಾದ ಉಪಕರವನ್ನು, ಸದರಿ ಅಧಿಸೂಚನೆಯಲ್ಲಿ ನಿರ್ದಿಷ್ಟಪಡಿಸಿದ ರೀತಿಯಲ್ಲಿ ವಿದ್ಯುನ್ಮಾನ ವಿಧಾನದಲ್ಲಿ ಅಂತರ್ಜಾಲದ ಮೂಲಕ ಜಮೆ ಮಾಡತಕ್ಕದ್ದು."

**3. 1958ರ ಕರ್ನಾಟಕ ಅಧಿನಿಯಮ 30ರ ತಿದ್ದುಪಡಿ.–** ಕರ್ನಾಟಕ ಮನೋರಂಜನಾ ತೆರಿಗೆ ಅಧಿನಿಯಮ 1958ರಲ್ಲಿ (1958ರ ಕರ್ನಾಟಕ ಅಧಿನಿಯಮ 30),–

(1) 6–ಎ ಪ್ರಕರಣದಲ್ಲಿ,

(ಎ) (1)ನೇ ಉಪಪ್ರಕರಣದಲ್ಲಿ, ಪರಂತುಕದ ತರುವಾಯ, ಈ ಮುಂದಿನ ಪರಂತುಕವನ್ನು ಸೇರಿಸತಕ್ಕದ್ದು, ಎಂದರೆ:–

"ಮತ್ತು ಪರಂತು, ಆಯುಕ್ತರು ಅಧಿಸೂಚಿಸಬಹುದಾದಂತೆ ಮನೋರಂಜನೆಗಳ ಮಾಲೀಕರ ನಿರ್ದಿಷ್ಟ ವರ್ಗವು, ನಿಯಮಿಸಲಾದ ನಮೂನೆಯಲ್ಲಿ ವಿವರಪಟ್ಟಿಯನ್ನು ಸದರಿ ಅಧಿಸೂಚನೆಯಲ್ಲಿ ನಿರ್ದಿಷ್ಟಪಡಿಸಿದ ರೀತಿಯಲ್ಲಿ ವಿದ್ಯುನ್ಮಾನ ವಿಧಾನದಲ್ಲಿ ಅಂತರ್ಜಾಲದ ಮೂಲಕ ಸಲ್ಲಿಸತಕ್ಕದ್ದು."

(ಬಿ) (1–ಎ)ನೇ ಉಪಪ್ರಕರಣದಲ್ಲಿ, ಈ ಮುಂದಿನ ಪರಂತುಕವನ್ನು ಸೇರಿಸತಕ್ಕದ್ದು, ಎಂದರೆ:–

"ಆಯುಕ್ತರು ಅಧಿಸೂಚಿಸಬಹುದಾದಂತೆ ಮನೋರಂಜನೆಗಳ ಮಾಲೀಕರ ನಿರ್ದಿಷ್ಟ ವರ್ಗವು (1)ನೇ ಉಪಪ್ರಕರಣದಡಿಯ ವಿವರಪಟ್ಟಿಯ ಆಧಾರದ ಮೇಲೆ ಪಾವತಿಸಬೇಕಾದ ತೆರಿಗೆಯನ್ನು, ಸದರಿ ಅಧಿಸೂಚನೆಯಲ್ಲಿ ನಿರ್ದಿಷ್ಟಪಡಿಸಿದ ರೀತಿಯಲ್ಲಿ ವಿದ್ಯುನ್ಮಾನ ವಿಧಾನದಲ್ಲಿ ಅಂತರ್ಜಾಲದ ಮೂಲಕ ಜಮೆ ಮಾಡತಕ್ಕದ್ದು."

(2) 9ನೇ ಪ್ರಕರಣದಲ್ಲಿ, (1)ನೇ ಉಪಪ್ರಕರಣದಲ್ಲಿ, ಈ ಮುಂದಿನ ಪರಂತುಕವನ್ನು ಸೇರಿಸತಕ್ಕದ್ದು, ಎಂದರೆ:–

"ಆಯುಕ್ತರು ಅಧಿಸೂಚಿಸಬಹುದಾದಂತೆ ಮನೋರಂಜನೆಗಳ ಮಾಲೀಕರ ನಿರ್ದಿಷ್ಟ ವರ್ಗವು, ಈ ಅಧಿನಿಯಮದ ಅಡಿಯಲ್ಲಿ ಬಾಕಿಯಿರುವ ತೆರಿಗೆ ಅಥವಾ ಯಾವುದೇ ಇತರ ಮೊತ್ತವನ್ನು, ಸದರಿ ಅಧಿಸೂಚನೆಯಲ್ಲಿ ನಿರ್ದಿಷ್ಟಪಡಿಸಿದ ರೀತಿಯಲ್ಲಿ ವಿದ್ಯುನ್ಮಾನ ವಿಧಾನದಲ್ಲಿ ಅಂತರ್ಜಾಲದ ಮೂಲಕ ಸಂದಾಯ ಮಾಡತಕ್ಕದ್ದು."

**4. 1976ರ ಕರ್ನಾಟಕ ಅಧಿನಿಯಮ 35ರ ತಿದ್ದುಪಡಿ.–** ಕರ್ನಾಟಕ ವೃತ್ತಿಗಳ, ಕಸಬುಗಳ, ಆಜೀವಿಕೆಗಳ ಮತ್ತು ಉದ್ಯೋಗಗಳ ಮೇಲಣ ತೆರಿಗೆ ಅಧಿನಿಯಮ, 1976ರಲ್ಲಿ (1976ರ ಕರ್ನಾಟಕ ಅಧಿನಿಯಮ 35),–

(1) 6ನೇ ಪ್ರಕರಣದಲ್ಲಿ,

(ಎ) (1)ನೇ ಉಪಪ್ರಕರಣದಲ್ಲಿ ಈ ಮುಂದಿನ ಪರಂತುಕವನ್ನು ಸೇರಿಸತಕ್ಕದ್ದು, ಎಂದರೆ:–

"ಮತ್ತು ಪರಂತು, ಆಯುಕ್ತರು ಅಧಿಸೂಚಿಸಬಹುದಾದಂತೆ, ನಿಯೋಜಕರ ನಿರ್ದಿಷ್ಟ ವರ್ಗವು, ನಿಯಮಿಸಲಾದ ನಮೂನೆಯಲ್ಲಿಯ ವಿವರಪಟ್ಟಿಯನ್ನು, ಸದರಿ ಅಧಿಸೂಚನೆಯಲ್ಲಿ ನಿರ್ದಿಷ್ಟಪಡಿಸಿದ ರೀತಿಯಲ್ಲಿ ವಿದ್ಯುನ್ಮಾನ ವಿಧಾನದಲ್ಲಿ ಅಂತರ್ಜಾಲದ ಮೂಲಕ ಸಲ್ಲಿಸತಕ್ಕದ್ದು."

(ಬಿ) (2)ನೇ ಉಪಪ್ರಕರಣದಲ್ಲಿ ಈ ಮುಂದಿನ ಪರಂತುಕವನ್ನು ಸೇರಿಸತಕ್ಕದ್ದು, ಎಂದರೆ:–

"ಪರಂತು, ಆಯುಕ್ತರು ಅಧಿಸೂಚಿಸಬಹುದಾದಂತೆ, ನಿಯೋಜಕರ ನಿರ್ದಿಷ್ಟ ವರ್ಗವು, (1)ನೇ ಉಪಪ್ರಕರದಡಿಯಲ್ಲಿನ ವಿವರಪಟ್ಟಿಯ ಆಧಾರದ ಮೇಲೆ ಪಾವತಿಸಬೇಕಾದ ತೆರಿಗೆಯನ್ನು, ಸದರಿ ಅಧಿಸೂಚನೆಯಲ್ಲಿ ನಿರ್ದಿಷ್ಟಪಡಿಸಲಾದ ರೀತಿಯಲ್ಲಿ, ವಿದ್ಯುನ್ಮಾನ ವಿಧಾನದಲ್ಲಿ ಅಂತರ್ಜಾಲದ ಮೂಲಕ ಜಮೆ ಮಾಡತಕ್ಕದ್ದು."

(2) 6–ಎ ಪ್ರಕರಣದಲ್ಲಿ,

(ಎ) (1)ನೇ ಉಪಪ್ರಕರಣದಲ್ಲಿ ಪರಂತುಕದ ತರುವಾಯ, ಈ ಮುಂದಿನ ಪರಂತುಕವನ್ನು ಸೇರಿಸತಕ್ಕದ್ದು, ಎಂದರೆ:–

"ಮತ್ತು ಪರಂತು, ಆಯುಕ್ತರು ಅಧಿಸೂಚಿಸಬಹುದಾದಂತೆ, ನಿಯೋಜಕರ ನಿರ್ದಿಷ್ಟ ವರ್ಗವು, ನಿಯಮಿಸಲಾದ ನಮೂನೆಯಲ್ಲಿಯ ವಿವರಪಟ್ಟಿಯನ್ನು, ಸದರಿ ಅಧಿಸೂಚನೆಯಲ್ಲಿ ನಿರ್ದಿಷ್ಟಪಡಿಸಲಾದ ರೀತಿಯಲ್ಲಿ, ವಿದ್ಯುನ್ಮಾನ ವಿಧಾನದಲ್ಲಿ ಅಂತರ್ಜಾಲದ ಮೂಲಕ ಸಲ್ಲಿಸತಕ್ಕದ್ದು."

(ಬಿ) (2)ನೇ ಉಪಪ್ರಕರಣದಲ್ಲಿ, ಈ ಮುಂದಿನ ಪರಂತುಕವನ್ನು ಸೇರಿಸತಕ್ಕದ್ದು, ಎಂದರೆ:–

"ಪರಂತು, ಆಯುಕ್ತರು ಅಧಿಸೂಚಿಸಬಹುದಾದಂತೆ, ನಿಯೋಜಕರ ನಿರ್ದಿಷ್ಟ ವರ್ಗವು, (1)ನೇ ಉಪಪ್ರಕರಣದಡಿಯಲ್ಲಿನ ವಿವರಪಟ್ಟಿಯ ಆಧಾರದ ಮೇಲೆ ಪಾವತಿಸಬೇಕಾದ ತೆರಿಗೆಯನ್ನು, ಸದರಿ ಅಧಿಸೂಚನೆಯಲ್ಲಿ ನಿರ್ದಿಷ್ಟಪಡಿಸಲಾದ ರೀತಿಯಲ್ಲಿ, ವಿದ್ಯುನ್ಮಾನ ವಿಧಾನದಲ್ಲಿ ಅಂತರ್ಜಾಲದ ಮೂಲಕ ಜಮೆ ಮಾಡತಕ್ಕದ್ದು."

(3) 10ನೇ ಪ್ರಕರಣದಲ್ಲಿ,

(ಎ) (1)ನೇ ಉಪಪ್ರಕರಣದಲ್ಲಿ, ಪರಂತುಕದ ತರುವಾಯ, ಈ ಮುಂದಿನ ಪರಂತುಕವನ್ನು ಸೇರಿಸತಕ್ಕದ್ದು, ಎಂದರೆ:–

"ಮತ್ತು ಪರಂತು, ಆಯುಕ್ತರು ಅಧಿಸೂಚಿಸಬಹುದಾದಂತೆ, ಹೆಸರು ದಾಖಲಾದ ವ್ಯಕ್ತಿಗಳ ನಿರ್ದಿಷ್ಟ ವರ್ಗವು, ಪಾವತಿಸಬೇಕಾದ ತೆರಿಗೆಯನ್ನು ವಿದ್ಯುನ್ಮಾನ ವಿಧಾನದಲ್ಲಿ ಅಂತರ್ಜಾಲದ ಮೂಲಕ ಜಮೆ ಮಾಡತಕ್ಕದ್ದು, ಹಾಗೆಯೇ ನಿಯಮಿಸಬಹುದಾದ ನಮೂನೆಯಲ್ಲಿ ವಿವರಪಟ್ಟಿಯನ್ನು, ಸದರಿ ಅಧಿಸೂಚನೆಯಲ್ಲಿ ನಿರ್ದಿಷ್ಟಪಡಿಸಲಾದ ನಮೂನೆಯಲ್ಲಿ ವಿದ್ಯುನ್ಮಾನ ವಿಧಾನದಲ್ಲಿ ಅಂತರ್ಜಾಲದ ಮೂಲಕ ಸಲ್ಲಿಸತಕ್ಕದ್ದು."

(ಬಿ) (5)ನೇ ಉಪಪ್ರಕರಣದಲ್ಲಿ ಈ ಮುಂದಿನ ಪರಂತುಕವನ್ನು ಸೇರಿಸತಕ್ಕದ್ದು, ಎಂದರೆ:–

"ಮತ್ತು ಪರಂತು, ಆಯುಕ್ತರು ಅಧಿಸೂಚಿಸಬಹುದಾದಂತೆ, ಹೆಸರು ದಾಖಲಾದ ವ್ಯಕ್ತಿಗಳ ನಿರ್ದಿಷ್ಟ ವರ್ಗವು, ನಿಯಮಿಸಬಹುದಾದ ನಮೂನೆಯಲ್ಲಿ, ವಿದ್ಯುನ್ಮಾನ ವಿಧಾನದಲ್ಲಿ ಅಂತರ್ಜಾಲದ ಮೂಲಕ ವಿವರಪಟ್ಟಿಯನ್ನು ಸಲ್ಲಿಸತಕ್ಕದ್ದು, ಹಾಗೆಯೇ ವಿವರಪಟ್ಟಿಯ ಆಧಾರದ ಮೇಲೆ ಕಡಿತಗೊಳಿಸಿದ ತೆರಿಗೆಯ ಮೊತ್ತವನ್ನು, ಸದರಿ ಅಧಿಸೂಚನೆಯಲ್ಲಿ ನಿರ್ದಿಷ್ಟಪಡಿಸಲಾದ ರೀತಿಯಲ್ಲಿ, ವಿದ್ಯುನ್ಮಾನ ವಿಧಾನದಲ್ಲಿ ಅಂತರ್ಜಾಲದ ಮೂಲಕ ಜಮೆ ಮಾಡತಕ್ಕದ್ದು."

**5. 1979ರ ಕರ್ನಾಟಕ ಅಧಿನಿಯಮ 22ರ ತಿದ್ದುಪಡಿ.–** ಕರ್ನಾಟಕ ವಿಲಾಸಗಳ ಮೇಲೆ ತೆರಿಗೆ ಅಧಿನಿಯಮ, 1979ರಲ್ಲಿ (1979ರ ಕರ್ನಾಟಕ ಅಧಿನಿಯಮ 22),–

(1) 3ನೇ ಪ್ರಕರಣದಲ್ಲಿ (1)ನೇ ಉಪಪ್ರಕರಣದಲ್ಲಿ,

(ಎ) ಕ್ರಮ ಸಂಖ್ಯೆ 2ಕ್ಕೆ ಸಂಬಂಧಿಸಿದ ನಮೂದುಗಳಲ್ಲಿ, "ಅಂಥ ಚಾರ್ಜುಗಳ ಶೇಕಡಾ ಆರರಷ್ಟು" ಎಂಬ ಪದಗಳಿಗೆ "ಅಂಥ ಚಾರ್ಜುಗಳ ಶೇಕಡಾ ಎಂಟರಷ್ಟು" ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು;

(ಬಿ) ಕ್ರಮ ಸಂಖ್ಯೆ 3ಕ್ಕೆ ಸಂಬಂಧಿಸಿದ ನಮೂದುಗಳಲ್ಲಿ, "ಅಂಥ ಚಾರ್ಜುಗಳ ಶೇಕಡಾ ಹತ್ತರಷ್ಟು" ಎಂಬ ಪದಗಳಿಗೆ "ಅಂಥ ಚಾರ್ಜುಗಳ ಶೇಕಡಾ ಹನ್ನೆರಡರಷ್ಟು" ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು;

(2) 5ನೇ ಪ್ರಕರಣದಲ್ಲಿ,

(ಎ) (1)ನೇ ಉಪಪ್ರಕರಣದಲ್ಲಿ, ಈ ಮುಂದಿನ ಪರಂತುಕವನ್ನು ಸೇರಿಸತಕ್ಕದ್ದು, ಎಂದರೆ:–

"ಪರಂತು ಆಯುಕ್ತರು ಅಧಿಸೂಚಿಸಬಹುದಾದಂತೆ, ಮಾಲೀಕರುಗಳ ನಿರ್ದಿಷ್ಟ ವರ್ಗವು, ನಿಯಮಿಸಬಹುದಾದ ನಮೂನೆಯಲ್ಲಿ ವಿವರಪಟ್ಟಿಯನ್ನು, ಸದರಿ ಅಧಿಸೂಚನೆಯಲ್ಲಿ ನಿರ್ದಿಷ್ಟಪಡಿಸಿದ ರೀತಿಯಲ್ಲಿ, ವಿದ್ಯುನ್ಮಾನ ವಿಧಾನದಲ್ಲಿ ಅಂತರ್ಜಾಲದ ಮೂಲಕ ಸಲ್ಲಿಸತಕ್ಕದ್ದು."

(ಬಿ) (2)ನೇ ಉಪಪ್ರಕರಣದಲ್ಲಿ, ಈ ಮುಂದಿನ ಪರಂತುಕವನ್ನು ಸೇರಿಸತಕ್ಕದ್ದು, ಎಂದರೆ:–

"ಪರಂತು ಆಯುಕ್ತರು ಅಧಿಸೂಚಿಸಬಹುದಾದಂತೆ, ಮಾಲೀಕರುಗಳ ನಿರ್ದಿಷ್ಟ ವರ್ಗವು, (1)ನೇ ಉಪಪ್ರಕರಣದಡಿಯಲ್ಲಿನ ವಿವರಪಟ್ಟಿಯ ಆಧಾರದ ಮೇಲೆ ಪಾವತಿ ಮಾಡಬೇಕಾದ ತೆರಿಗೆಯನ್ನು ಸದರಿ ಅಧಿಸೂಚನೆಯಲ್ಲಿ ನಿರ್ದಿಷ್ಟಪಡಿಸಲಾದ ರೀತಿಯಲ್ಲಿ, ವಿದ್ಯುನ್ಮಾನ ವಿಧಾನದಲ್ಲಿ ಅಂತರ್ಜಾಲದ ಮೂಲಕ ಜಮೆ ಮಾಡತಕ್ಕದ್ದು."

(3) 5-ಎ ಪ್ರಕರಣದಲ್ಲಿ,

(ಎ) (1)ನೇ ಉಪಪ್ರಕರಣದಲ್ಲಿ, ಈ ಮುಂದಿನ ಪರಂತುಕವನ್ನು ಸೇರಿಸತಕ್ಕದ್ದು, ಎಂದರೆ:-

"ಪರಂತು ಆಯುಕ್ತರು ಅಧಿಸೂಚಿಸಬಹುದಾದಂತೆ, ಮಾಲೀಕರುಗಳ ನಿರ್ದಿಷ್ಟ ವರ್ಗವು, ನಿಯಮಿಸಲಾದ ನಮೂನೆಯಲ್ಲಿ ವಿವರಪಟ್ಟಿಯನ್ನು, ಸದರಿ ಅಧಿಸೂಚನೆಯಲ್ಲಿ ನಿರ್ದಿಷ್ಟಪಡಿಸಲಾದ ರೀತಿಯಲ್ಲಿ, ವಿದ್ಯುನ್ಮಾನ ವಿಧಾನದಲ್ಲಿ ಅಂತರ್ಜಾಲದ ಮೂಲಕ ಸಲ್ಲಿಸತಕ್ಕದ್ದು."

(ಬಿ) (2)ನೇ ಉಪಪ್ರಕರಣದಲ್ಲಿ, ಈ ಮುಂದಿನ ಪರಂತುಕವನ್ನು ಸೇರಿಸತಕ್ಕದ್ದು, ಎಂದರೆ:-

"ಪರಂತು ಆಯುಕ್ತರು ಅಧಿಸೂಚಿಸಬಹುದಾದಂತೆ, ಮಾಲೀಕರುಗಳ ನಿರ್ದಿಷ್ಟ ವರ್ಗವು, (1)ನೇ ಉಪಪ್ರಕರಣದಡಿಯಲ್ಲಿನ ವಿವರಪಟ್ಟಿಯ ಆಧಾರದ ಮೇಲೆ ಪಾವತಿಸಬೇಕಾದ ತೆರಿಗೆಯನ್ನು, ಸದರಿ ಅಧಿಸೂಚನೆಯಲ್ಲಿ ನಿರ್ದಿಷ್ಟಪಡಿಸಲಾದ ರೀತಿಯಲ್ಲಿ, ವಿದ್ಯುನ್ಮಾನ ವಿಧಾನದಲ್ಲಿ ಅಂತರ್ಜಾಲದ ಮೂಲಕ ಜಮೆ ಮಾಡತಕ್ಕದ್ದು."

(4) 8ನೇ ಪ್ರಕರಣದಲ್ಲಿ, (1)ನೇ ಉಪಪ್ರಕರಣದಲ್ಲಿ, ಈ ಮುಂದಿನ ಪರಂತುಕವನ್ನು ಸೇರಿಸತಕ್ಕದ್ದು, ಎಂದರೆ:-

"ಪರಂತು ಆಯುಕ್ತರು ಅಧಿಸೂಚಿಸಬಹುದಾದಂತೆ, ಮಾಲೀಕರುಗಳ ನಿರ್ದಿಷ್ಟ ವರ್ಗವು, ಈ ಅಧಿನಿಯಮದಡಿಯಲ್ಲಿ ಬಾಕಿಯಿರುವ ತೆರಿಗೆ ಅಥವಾ ಯಾವುದೇ ಇತರ ಮೊತ್ತವನ್ನು, ಸದರಿ ಅಧಿಸೂಚನೆಯಲ್ಲಿ ನಿರ್ದಿಷ್ಟಪಡಿಸಲಾದ ರೀತಿಯಲ್ಲಿ, ವಿದ್ಯುನ್ಮಾನ ವಿಧಾನದಲ್ಲಿ ಅಂತರ್ಜಾಲದ ಮೂಲಕ ಜಮೆ ಮಾಡತಕ್ಕದ್ದು."

(5) 11-ಎ ಪ್ರಕರಣದಲ್ಲಿ, (1)ನೇ ಉಪ ಪ್ರಕರಣದಲ್ಲಿ, "ಅರವತ್ತು ದಿನಗಳು" ಎಂಬ ಪದಗಳಿಗೆ, ಅವು ಬರುವ ಎರಡು ಕಡೆಗಳಲ್ಲಿ "ಒಂದು ನೂರಾ ಎಂಬತ್ತು ದಿನಗಳು" ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು.

**6. 1979ರ ಕರ್ನಾಟಕ ಅಧಿನಿಯಮ 27ರ ತಿದ್ದುಪಡಿ.-** ಕರ್ನಾಟಕ ಸರಕುಗಳ ಪ್ರವೇಶದ ಮೇಲೆ ತೆರಿಗೆ ಅಧಿನಿಯಮ, 1979ರಲ್ಲಿ (1979ರ ಕರ್ನಾಟಕ ಅಧಿನಿಯಮ 27),-

(1) 5ನೇ ಪ್ರಕರಣದಲ್ಲಿ,

(ಎ) (1)ನೇ ಉಪಪ್ರಕರಣದಲ್ಲಿ, ಈ ಮುಂದಿನ ಪರಂತುಕವನ್ನು ಸೇರಿಸತಕ್ಕದ್ದು, ಎಂದರೆ:-

"ಪರಂತು, ಆಯುಕ್ತರು ಅಧಿಸೂಚಿಸಬಹುದಾದಂತೆ ವ್ಯಾಪಾರಿಗಳ ನಿರ್ದಿಷ್ಟ ವರ್ಗವು, ನಿಯಮಿಸಲಾದ ನಮೂನೆಯಲ್ಲಿ ವಿವರಪಟ್ಟಿಯನ್ನು, ಸದರಿ ಅಧಿಸೂಚನೆಯಲ್ಲಿ ನಿರ್ದಿಷ್ಟಪಡಿಸಲಾದ ರೀತಿಯಲ್ಲಿ, ವಿದ್ಯುನ್ಮಾನ ವಿಧಾನದಲ್ಲಿ ಅಂತರ್ಜಾಲದ ಮೂಲಕ, ಸಲ್ಲಿಸತಕ್ಕದ್ದು."

(ಬಿ) (2)ನೇ ಉಪಪ್ರಕರಣದಲ್ಲಿ, ಈ ಮುಂದಿನ ಪರಂತುಕವನ್ನು ಸೇರಿಸತಕ್ಕದ್ದು, ಎಂದರೆ:-

"ಪರಂತು, ಆಯುಕ್ತರು ಅಧಿಸೂಚಿಸಬಹುದಾದಂತೆ ವ್ಯಾಪಾರಿಗಳ ನಿರ್ದಿಷ್ಟ ವರ್ಗವು, (1)ನೇ ಉಪಪ್ರಕರಣದಡಿಯಲ್ಲಿನ ವಿವರಪಟ್ಟಿಯ ಆಧಾರದ ಮೇಲೆ ಪಾವತಿಸಬೇಕಾದ ತೆರಿಗೆಯನ್ನು, ಸದರಿ ಅಧಿಸೂಚನೆಯಲ್ಲಿ ನಿರ್ದಿಷ್ಟಪಡಿಸಲಾದ ರೀತಿಯಲ್ಲಿ, ವಿದ್ಯುನ್ಮಾನ ವಿಧಾನದಲ್ಲಿ ಅಂತರ್ಜಾಲದ ಮೂಲಕ, ಜಮೆ ಮಾಡತಕ್ಕದ್ದು."

(2) 7ನೇ ಪ್ರಕರಣದಲ್ಲಿ, (1)ನೇ ಉಪಪ್ರಕರಣದಲ್ಲಿ, ಈ ಮುಂದಿನ ಪರಂತುಕವನ್ನು ಸೇರಿಸತಕ್ಕದ್ದು, ಎಂದರೆ:-

"ಪರಂತು, ಆಯುಕ್ತರು ಅಧಿಸೂಚಿಸಬಹುದಾದಂತೆ ವ್ಯಾಪಾರಿಗಳ ನಿರ್ದಿಷ್ಟ ವರ್ಗವು, ನಿಯಮಿಸಲಾದ ನಮೂನೆಯಲ್ಲಿ ವಿವರಪಟ್ಟಿಯನ್ನು, ವಿದ್ಯುನ್ಮಾನ ವಿಧಾನದಲ್ಲಿ ಅಂತರ್ಜಾಲದ ಮೂಲಕ, ಸಲ್ಲಿಸತಕ್ಕದ್ದು, ಹಾಗೆಯೇ ವಿವರಪಟ್ಟಿಯ ಆಧಾರದ ಮೇಲೆ ಪಾವತಿಸಬೇಕಾದ ತೆರಿಗೆಯನ್ನು ವಿದ್ಯುನ್ಮಾನ ವಿಧಾನದಲ್ಲಿ ಅಂತರ್ಜಾಲದ ಮೂಲಕ, ಸದರಿ ಅಧಿಸೂಚನೆಯಲ್ಲಿ ನಿರ್ದಿಷ್ಟಪಡಿಸಲಾದ ರೀತಿಯಲ್ಲಿ, ಜಮೆ ಮಾಡತಕ್ಕದ್ದು."

(3) 8ನೇ ಪ್ರಕರಣದಲ್ಲಿ, (1)ನೇ ಉಪಪ್ರಕರಣದಲ್ಲಿ, ಈ ಮುಂದಿನ ಪರಂತುಕವನ್ನು ಸೇರಿಸತಕ್ಕದ್ದು, ಎಂದರೆ:-

"ಮತ್ತು ಪರಂತು, ಆಯುಕ್ತರು ಅಧಿಸೂಚಿಸಬಹುದಾದಂತೆ ವ್ಯಾಪಾರಿಗಳ ನಿರ್ದಿಷ್ಟ ವರ್ಗವು, ಈ ಅಧಿನಿಯಮದ ಅಡಿಯಲ್ಲಿ ಬಾಕಿಯಿರುವ ತೆರಿಗೆ ಅಥವಾ ಯಾವುದೇ ಇತರ ಮೊತ್ತವನ್ನು, ವಿದ್ಯುನ್ಮಾನ ವಿಧಾನದಲ್ಲಿ ಅಂತರ್ಜಾಲದ ಮೂಲಕ, ಸದರಿ ಅಧಿಸೂಚನೆಯಲ್ಲಿ, ನಿರ್ದಿಷ್ಟಪಡಿಸಲಾದ ರೀತಿಯಲ್ಲಿ ಜಮೆ ಮಾಡತಕ್ಕದ್ದು."

(4) 8-ಎ ಪ್ರಕರಣದ ತರುವಾಯ, ಈ ಮುಂದಿನದನ್ನು ಸೇರಿಸತಕ್ಕದ್ದು, ಎಂದರೆ:-

**"8-ಬಿ ಸಕ್ಕರೆಯ ಸಂಬಂಧದಲ್ಲಿ ತೆರಿಗೆಯನ್ನು ಮೂಲದಲ್ಲಿಯೇ ಸಂದಾಯ ಮಾಡುವುದು.-** (1) 7 ಮತ್ತು 8ನೇ ಪ್ರಕರಣಗಳಲ್ಲಿ ಏನೇ ಒಳಗೊಂಡಿದ್ದರೂ, ರಾಜ್ಯದಲ್ಲಿ ಉತ್ಪಾದಕರಿಂದ ಸಕ್ಕರೆಯನ್ನು ಖರೀದಿಸುವ ಪ್ರತಿಯೊಬ್ಬ ವ್ಯಾಪಾರಿಯು, ಅಂಥ ಸಕ್ಕರೆಯ ಉತ್ಪಾದಕನಿಗೆ, ಅಂಥ ವ್ಯಾಪಾರಿಯು ರಾಜ್ಯದಲ್ಲಿನ ಸ್ಥಳೀಯ ಪ್ರದೇಶದೊಳಗೆ ಹಾಗೆ ಖರೀದಿಸಿದ ಸಕ್ಕರೆಯ ಪ್ರವೇಶದ ಮೇಲೆ ಅಧಿನಿಯಮದಡಿ ಅಂಥ ವ್ಯಾಪಾರಿಯು ಸಂದಾಯ ಮಾಡಬೇಕಾದ ತೆರಿಗೆಗೆ ಸಮನಾದ ಮೊತ್ತವನ್ನು ಸಂದಾಯ ಮಾಡತಕ್ಕದ್ದು.

(2) (1)ನೇ ಉಪಪ್ರಕರಣದಡಿಯಲ್ಲಿ, ನಿರ್ದಿಷ್ಟಪಡಿಸಿದಂತೆ ಖರೀದಿದಾರನು ಯಾರಿಗೆ ಪಾವತಿ ಮಾಡಬೇಕಾಗಿದೆಯೋ, ಆ ಪ್ರತಿಯೊಬ್ಬ ಸಕ್ಕರೆ ಉತ್ಪಾದಕನು, ತನಗೆ ಅಂಥ ಮೊತ್ತವು ಸಂದಾಯವಾದ ತರುವಾಯವೇ ಖರೀದಿದಾರನಿಗೆ ಸಕ್ಕರೆಯನ್ನು ಬಟವಾಡೆ ಮಾಡತಕ್ಕದ್ದು ಮತ್ತು ಅಂಥ ಮೊತ್ತವನ್ನು ಸಂದಾಯ ಮಾಡದೇ ಸಕ್ಕರೆಯನ್ನು ಬಟವಾಡೆ ಮಾಡಿದ್ದಲ್ಲಿ, ಆ ಅಧಿನಿಯಮದಡಿಯಲ್ಲಿ ಅಂಥ ಸಕ್ಕರೆ ಉತ್ಪಾದಕನಿಂದ ಬಾಕಿಯಿರುವ ಮೊತ್ತವೆಂದು ಭಾವಿಸತಕ್ಕದ್ದು.

(3) ರಾಜ್ಯದಲ್ಲಿನ ಪ್ರತಿಯೊಬ್ಬ ಸಕ್ಕರೆ ಉತ್ಪಾದಕನು, ಹಿಂದಿನ ತಿಂಗಳಿನ ಅವಧಿಯಲ್ಲಿ (1)ನೇ ಉಪಪ್ರಕರಣದಲ್ಲಿ ತನಗೆ ಸಂದಾಯವಾದ ತೆರಿಗೆಯ ವಿವರಗಳನ್ನು ಒಳಗೊಂಡ, ನಿಯಮಿಸಲಾದ ನಮೂನೆಯಲ್ಲಿ ಒಂದು ವಿವರಪಟ್ಟಿಯನ್ನು ನಿಯಮಿಸಲಾದ ಪ್ರಾಧಿಕಾರಕ್ಕೆ ಪ್ರತಿ ತಿಂಗಳು ಸಲ್ಲಿಸತಕ್ಕದ್ದು ಮತ್ತು ಅಂಥ ಸಂದಾಯವನ್ನು ಮಾಡಿರುವ ಹಿಂದಿನ ತಿಂಗಳು ಮುಕ್ತಾಯವಾದ ತರುವಾಯ ಇಪ್ಪತ್ತು ದಿನಗಳೊಳಗೆ ತನಗೆ ಹಾಗೆ ಸಂದಾಯವಾದ ಮೊತ್ತವನ್ನು ಜಮೆ ಮಾಡುವುದು ಮತ್ತು ಹಾಗೆ ಜಮೆ ಮಾಡಬೇಕಾದ ಮೊತ್ತವನ್ನು ಈ ಅಧಿನಿಯಮದಡಿ ಬಾಕಿ ಮೊತ್ತವೆಂದು ಭಾವಿಸತಕ್ಕದ್ದು:

ಪರಂತು, ಆಯುಕ್ತರು ಅಧಿಸೂಚಿಸಬಹುದಾದಂತೆ, ಉತ್ಪಾದಕರ ನಿರ್ದಿಷ್ಟ ವರ್ಗವು, ನಿಯಮಿಸಲಾದ ನಮೂನೆಯಲ್ಲಿ ವಿವರಪಟ್ಟಿಯನ್ನು ವಿದ್ಯುನ್ಮಾನ ವಿಧಾನದಲ್ಲಿ ಸಲ್ಲಿಸತಕ್ಕದ್ದು ಮತ್ತು ಅಂಥ ವಿವರಪಟ್ಟಿಯ ಆಧಾರದ ಮೇಲೆ ಪಾವತಿಸಬೇಕಾದ ತೆರಿಗೆಯ ಮೊತ್ತವನ್ನು, ವಿದ್ಯುನ್ಮಾನದ ವಿಧಾನದಲ್ಲಿ ಅಂತರ್ಜಾಲದ ಮೂಲಕ, ಸದರಿ ಅಧಿಸೂಚನೆಯಲ್ಲಿ ನಿರ್ದಿಷ್ಟಪಡಿಸಿದ ರೀತಿಯಲ್ಲಿ ಜಮೆ ಮಾಡತಕ್ಕದ್ದು.

(4) (3)ನೇ ಉಪಪ್ರಕರಣದಲ್ಲಿ ಯಾರಿಗೆ ಸಂದಾಯ ಮಾಡಲಾಗಿದೆಯೋ, ಆ ಸಕ್ಕರೆಯ ಉತ್ಪಾದಕನು, ಅಂಥ ಸಂದಾಯವನ್ನು ಮಾಡಿದ ಖರೀದಿದಾರನಿಗೆ, ನಿಯಮಿಸಬಹುದಾಂಥ ವಿವರಗಳನ್ನು ಒಳಗೊಂಡ, ನಿಯಮಿಸಲಾದ ಪ್ರಾಧಿಕಾರದಿಂದ ಪಡೆಯಲಾದ ಒಂದು ಪ್ರಮಾಣಪತ್ರವನ್ನು ಒದಗಿಸತಕ್ಕದ್ದು.

(5) (1)ನೇ ಉಪಪ್ರಕರಣದ ಅನುಸಾರವಾಗಿನ ಸಂದಾಯವು, ಖರೀದಿಸಿದ ಸಕ್ಕರೆಯ ಪ್ರವೇಶದ ಮೇಲೆ ಖರೀದಿಸುವ ವ್ಯಾಪಾರಿಯಿಂದ ಈ ಅಧಿನಿಯಮದಡಿಯಲ್ಲಿ ಬಾಕಿಯಿರುವ ತೆರಿಗೆಯ ವಸೂಲಿಯ ಇತರ ಯಾವುದೇ ರೀತಿಗೆ ಬಾಧಕವಾಗತಕ್ಕದ್ದಲ್ಲ.

(6) (3)ನೇ ಉಪಪ್ರಕರಣದ ಅಡಿಯಲ್ಲಿ ಖರೀದಿಸಿದ ಸಕ್ಕರೆಯ ಸಂಬಂಧದಲ್ಲಿ ತೆರಿಗೆಯನ್ನು ಜಮೆ ಮಾಡಿದ್ದಲ್ಲಿ, ಖರೀದಿಸುವ ವ್ಯಾಪಾರಿಯು ಅಂಥ ಸಕ್ಕರೆಯ ಪ್ರವೇಶದ ಮೇಲೆ, ಪಾವತಿ ಮಾಡಬೇಕಾದ ತೆರಿಗೆ ಅಥವಾ ಅಂಥ ಸಕ್ಕರೆಯ ಖರೀದಿಯ ಸಂಬಂಧದಲ್ಲಿ, ಸಂದಾಯ ಮಾಡಬೇಕಿಲ್ಲದ ಯಾವುದೇ ತೆರಿಗೆಯನ್ನು, ಖರೀದಿ ವ್ಯಾಪಾರಿಯು ಸಂದಾಯ ಮಾಡಬೇಕಾದ ಇತರ ಯಾವುದೇ ತೆರಿಗೆಯನ್ನು, ಸದರಿ ಉಪಪ್ರಕರಣದಡಿಯಲ್ಲಿ ಈಗಾಗಲೇ ಜಮೆ ಮಾಡಲಾದ ತೆರಿಗೆಯ ಮೊತ್ತದಿಂದ ಕಡಿತಗೊಳಿಸತಕ್ಕದ್ದು.

(7) ಸಕ್ಕರೆಯ ಅಂಥ ಪ್ರವೇಶದ ಮೇಲಿನ ತೆರಿಗೆಯನ್ನು, ಈಗಾಗಲೇ ಜಮೆ ಮಾಡಲಾಗಿದೆ ಎಂಬುದನ್ನು ರುಜುವಾತು ಪಡಿಸುವ ಮತ್ತು ಹಾಗೆ ಜಮೆ ಮಾಡಿದ ತೆರಿಗೆಯ ಖಚಿತ ಮೊತ್ತವನ್ನು ಸ್ಥಾಪಿಸುವ ಭಾರವು ರಿಯಾಯಿತಿಯನ್ನು ಕ್ಲೇಮು ಮಾಡುವ ವ್ಯಾಪಾರಿಯ ಮೇಲಿರುತ್ತದೆ."

(5) 12-ಸಿ ಪ್ರಕರಣದಲ್ಲಿ, (1)ನೇ ಉಪಪ್ರಕರಣದಲ್ಲಿ, "ಕರ್ನಾಟಕ ಮಾರಾಟ ತೆರಿಗೆ ಅಧಿನಿಯಮ, 1957ರ (1957ರ ಕರ್ನಾಟಕ ಅಧಿನಿಯಮ 25) 4ನೇ ಪ್ರಕರಣದ" ಎಂಬ ಪದಗಳು, ಅಂಕಿಗಳು ಮತ್ತು ಆವರಣ ಚಿಹ್ನೆಗಳಿಗೆ, "ಕರ್ನಾಟಕ ಮೌಲ್ಯವರ್ಧಿತ ತೆರಿಗೆ ಅಧಿನಿಯಮ, 2003ರ (2004ರ ಕರ್ನಾಟಕ ಅಧಿನಿಯಮ 32) 60ನೇ ಪ್ರಕರಣ" ಎಂಬ ಪದಗಳು, ಅಂಕಿಗಳು ಮತ್ತು ಆವರಣ ಚಿಹ್ನೆಗಳನ್ನು ಪ್ರತಿಯೋಜಿಸತಕ್ಕದ್ದು.

**7. ಕರನಿರ್ಧರಣೆಯ ಸಿಂಧುತ್ವ ಇತ್ಯಾದಿ.-** ಯಾವುದೇ ನ್ಯಾಯಾಲಯ, ನ್ಯಾಯಾಧಿಕರಣ ಅಥವಾ ಇತರ ಪ್ರಾಧಿಕಾರದ ಯಾವುದೇ ತೀರ್ಪು, ಡಿಕ್ರಿ ಅಥವಾ ಆದೇಶದಲ್ಲಿ ಇದಕ್ಕೆ ವಿರುದ್ಧವಾದುದ್ದು ಏನೇ ಇದ್ದರೂ, ಈ ಅಧಿನಿಯಮದ ಪ್ರಾರಂಭಕ್ಕೆ ಮುಂಚೆ ಕರ್ನಾಟಕ ಮಾರಾಟ ತೆರಿಗೆ ಅಧಿನಿಯಮ, 1957ರ (1957ರ ಕರ್ನಾಟಕ ಅಧಿನಿಯಮ 25) (ಇದರಲ್ಲಿ ಇನ್ನು ಮುಂದೆ ಸದರಿ ಅಧಿನಿಯಮವೆಂದು ಉಲ್ಲೇಖಿಸಲಾಗಿದೆ) ಉಪಬಂಧಗಳ ಅಡಿಯಲ್ಲಿ ಕೈಗೊಂಡ ಅಥವಾ ಮಾಡಿದ ಅಥವಾ ಕೈಗೊಳ್ಳಲಾಗಿದೆ ಅಥವಾ ಮಾಡಲಾಗಿದೆ ಎಂದು ತಾತ್ಪರ್ಯವಾಗುವ ಯಾವುದೇ ಕ್ರಮ ಅಥವಾ ಯಾವುದೇ ಕಾರ್ಯವನ್ನು (ತೆರಿಗೆ ವಿಧಿಸುವಿಕೆ, ನಿರ್ಧರಣೆ ಮತ್ತು ವಸೂಲಾತಿಗಾಗಿ ಅಥವಾ ಅಂಥ ವಿಧಿಸುವಿಕೆ, ನಿರ್ಧರಣೆ ಮತ್ತು ವಸೂಲಿಯ ಸಂಬಂಧದಲ್ಲಿ ತೆರಿಗೆಯ ರೂಪದಲ್ಲಿ ಸಂಗ್ರಹಿಸಲಾಗಿದೆ ಎಂದು ತಾತ್ಪರ್ಯವಾಗುವ ಮೊಬಲಗಿನ ವಿಧಿಸುವಿಕೆ, ನಿರ್ಧರಣೆ ಮತ್ತು ಸಂಗ್ರಹಣೆಗಾಗಿ ಹೊರಡಿಸಿದ ಯಾವುವೇ ನೋಟೀಸುಗಳು ಅಥವಾ ಆದೇಶಗಳು ಮತ್ತು ನಡೆಸಿದ ಎಲ್ಲ ವ್ಯವಹರಣೆಗಳು

ಸೇರಿದಂತೆ) ತನ್ನ ಸದಸ್ಯರಿಗೆ ನಗದಿಗಾಗಿ, ಮುಂದಕ್ಕೆ ಹಾಕಲಾದ ಸಂದಾಯಗಳಿಗಾಗಿ ಅಥವಾ ಇತರ ಬೆಲೆಯುಳ್ಳ ಪ್ರತಿಫಲಕ್ಕಾಗಿ ಸರಕುಗಳನ್ನು ಸರಬರಾಜು ಮಾಡುವ ನಿಗಮಿತವಲ್ಲದ ಸಂಘ ಅಥವಾ ವ್ಯಕ್ತಿಗಳ ನಿಕಾಯದ ಸಂಬಂಧದಲ್ಲಿ, ಈ ಅಧಿನಿಯಮದ ಮೂಲಕ ತಿದ್ದುಪಡಿಯಾದ ಸದರಿ ಅಧಿನಿಯಮದ ಅಡಿಯಲ್ಲಿ ಮಾಡಿದ, ಕೈಗೊಂಡ ಅಥವಾ ನಡೆಸಿದ ವಿಧಿಸುವಿಕೆ, ನಿರ್ಧರಣೆ ಅಥವಾ ವಸೂಲಾತಿ ಅಥವಾ ಕ್ರಮ ಅಥವಾ ಕಾರ್ಯವಾಗಿದ್ದರೆ ಹೇಗೋ ಹಾಗೆ ಎಂಬಂತೆ ಸಿಂಧುವಾಗಿವೆ ಮತ್ತು ಪರಿಣಾಮಕಾರಿಯಾಗಿವೆ ಎಂದು ಭಾವಿಸತಕ್ಕದ್ದು ಮತ್ತು ಅದಕ್ಕನುಸಾರವಾಗಿ,–

(ಎ) ಅಂಥ ತೆರಿಗೆಯ ವಿಧಿಸುವಿಕೆ, ನಿರ್ಧರಣೆ ಅಥವಾ ವಸೂಲಿಯ ಸಂಬಂಧದಲ್ಲಿ ಎಲ್ಲ ಉದ್ದೇಶಗಳಿಗಾಗಿ ಯಾವುದೇ ಪ್ರಾಧಿಕಾರವು ಕೈಗೊಂಡ ಅಥವಾ ನಡೆಸಿದ ಎಲ್ಲ ಕ್ರಮಗಳು, ವ್ಯವಹರಣೆಗಳು ಅಥವಾ ಕಾರ್ಯಗಳನ್ನು, ಕಾನೂನಿನ ಪ್ರಕಾರ ಕೈಗೊಳ್ಳಲಾಗಿದೆ ಮತ್ತು ನಡೆಸಲಾಗಿದೆ ಎಂದು ಮತ್ತು ಯಾವಾಗಲೂ ಹಾಗೆ ಕೈಗೊಳ್ಳಲಾಗಿದೆ ಅಥವಾ ನಡೆಸಲಾಗಿದೆ ಎಂದು ಭಾವಿಸತಕ್ಕದ್ದು.

(ಬಿ) ಅಂಥ ಯಾವುದೇ ತೆರಿಗೆಯ ಮರುಪಾವತಿಗಾಗಿ ಯಾವುದೇ ನ್ಯಾಯಾಲಯ ಅಥವಾ ನ್ಯಾಯಾಧಿಕರಣ ಅಥವಾ ಯಾವುದೇ ಪ್ರಾಧಿಕಾರದ ಮುಂದೆ ಯಾವುದೇ ದಾವೆ ಅಥವಾ ಇತರ ವ್ಯವಹರಣೆಗಳನ್ನು ನಡೆಸತಕ್ಕದ್ದಲ್ಲ ಅಥವಾ ಮುಂದುವರಿಸತಕ್ಕದ್ದಲ್ಲ; ಮತ್ತು

(ಸಿ) ಯಾವುದೇ ಅಂಥ ತೆರಿಗೆಯ ಮರುಪಾವತಿಗೆ ನಿರ್ದೇಶಿಸಿ ಯಾವ ನ್ಯಾಯಾಲಯವೂ ಯಾವುದೇ ಡಿಕ್ರಿ ಅಥವಾ ಆದೇಶವನ್ನು ಜಾರಿ ಮಾಡತಕ್ಕದ್ದಲ್ಲ.

**ಉದ್ದೇಶಗಳು ಮತ್ತು ಕಾರಣಗಳ ಹೇಳಿಕೆ**

ಆಯವ್ಯಯ ಭಾಷಣದಲ್ಲಿ ಮಾಡಿದ ಪ್ರಸ್ತಾವಗಳನ್ನು ಜಾರಿಗೊಳಿಸಲು ಮತ್ತು ಅವುಗಳಿಗೆ ಸಂಬಂಧಿಸಿದ ಮತ್ತು ಪ್ರಾಸಂಗಿಕವಾದ ವಿಷಯಗಳ ಬಗ್ಗೆ ಕರ್ನಾಟಕ ಮಾರಾಟ ತೆರಿಗೆ ಅಧಿನಿಯಮ, 1957, ಕರ್ನಾಟಕ ಮನೋರಂಜನಾ ತೆರಿಗೆ ಅಧಿನಿಯಮ, 1958, ಕರ್ನಾಟಕ ವೃತ್ತಿಗಳ, ಕಸಬುಗಳ, ಆಜೀವಿಕೆಗಳ ಮತ್ತು ಉದ್ಯೋಗಗಳ ಮೇಲಣ ತೆರಿಗೆ ಅಧಿನಿಯಮ, 1976 ಮತ್ತು ಕರ್ನಾಟಕ ವಿಲಾಸಗಳ ಮೇಲೆ ತೆರಿಗೆ ಅಧಿನಿಯಮ, 1979 ಇವುಗಳನ್ನು ತಿದ್ದುಪಡಿ ಮಾಡುವುದು ಹಾಗೂ ನಿರ್ದಿಷ್ಟವಾಗಿ ಈ ಮುಂದಿನವುಗಳಿಗೆ ಎಂದರೆ:–

(i) ಸೆಂಚುರಿ ಕ್ಲಬ್ ಮತ್ತು ಇತರರು–ವಿರುದ್ಧ–ಮೈಸೂರು ರಾಜ್ಯ ಮತ್ತು ಇತರರು ಪ್ರಕರಣದಲ್ಲಿ ಭಾರತ ಸಂವಿಧಾನದ ನಲವತ್ತಾರನೇ ತಿದ್ದುಪಡಿಗೆ ಮುಂಚೆ ಕರ್ನಾಟಕ ಮಾರಾಟ ತೆರಿಗೆ ಅಧಿನಿಯಮ, 1957ರಲ್ಲಿ ಮಾಡಲಾದ ಉಪಬಂಧಗಳು ಅಸಿಂಧು ಹಾಗೂ ಪ್ರವರ್ತನೀಯವಲ್ಲವೆಂದು ಘೋಷಿಸಿ ಉಚ್ಚ ನ್ಯಾಯಾಲಯವು ನೀಡಿದ ತೀರ್ಪಿನಿಂದಾಗಿ ಉಂಟಾದ ಸಂದೇಹಗಳನ್ನು ನಿವಾರಿಸುವುದಕ್ಕಾಗಿ ಭಾರತ ಸಂವಿಧಾನದ ನಲವತ್ತಾರನೇ ತಿದ್ದುಪಡಿಯ ಮೂಲಕ ಅಂಥ ವ್ಯವಹಾರಗಳ ಮೇಲೆ ತೆರಿಗೆಯನ್ನು ವಿಧಿಸುವುದಕ್ಕೆ ಉಪಬಂಧ ಕಲ್ಪಿಸಲು ರಾಜ್ಯ ವಿಧಾನ ಮಂಡಲಕ್ಕೆ ಅಧಿಕಾರ ನೀಡಲಾದ ದಿನಾಂಕವಾದ 1983ರ ಫೆಬ್ರವರಿ ಎರಡನೇ ದಿನಾಂಕದಿಂದ ಪೂರ್ವಾನ್ವಯವಾಗಿ, ನೋಂದಣಿಯಾದ ಅಥವಾ ನೋಂದಣಿಯಾಗಿಲ್ಲದ, ಕ್ಲಬ್‍ಗಳಂಥ ಸಂಘ ಅಥವಾ ವ್ಯಕ್ತಿಗಳ ನಿಕಾಯವು ಸರಬರಾಜು ಮಾಡಿದ ಸರಕುಗಳ ಮೇಲೆ ತೆರಿಗೆಯನ್ನು ವಿಧಿಸುವುದಕ್ಕೆ ಉಪಬಂಧ ಕಲ್ಪಿಸುವುದು,

(ii) ಸಕ್ಕರೆ ಕಾರ್ಖಾನೆಗಳು ಇರುವ ಸ್ಥಳದಲ್ಲಿ ಸಕ್ಕರೆಯನ್ನು ವ್ಯಾಪಾರಿಗಳಿಗೆ ಮಾರಾಟ ಮಾಡಿದಾಗ, ಆ ತರುವಾಯ ಅವರು ರಾಜ್ಯದಲ್ಲಿ ಯಾವುದೇ ಸ್ಥಳೀಯ ಪ್ರದೇಶದೊಳಗೆ ಅಂಥ ಸಕ್ಕರೆಯು ಪ್ರವೇಶಿಸುವಂತೆ ಮಾಡಿದಾಗ ಕರ್ನಾಟಕ ಸರಕುಗಳ ಪ್ರವೇಶದ ಮೇಲೆ ತೆರಿಗೆ ಅಧಿನಿಯಮ, 1979ರಡಿಯಲ್ಲಿ ಮುಂಗಡವಾಗಿ ಪ್ರವೇಶ ತೆರಿಗೆಯನ್ನು ಸಂಗ್ರಹಿಸುವುದಕ್ಕಾಗಿ ಉಪಬಂಧ ಕಲ್ಪಿಸುವುದು,

– ಅವಶ್ಯಕವೆಂದು ಪರಿಗಣಿಸಲಾಗಿದೆ ಮತ್ತು ಕೆಲವು ಪ್ರಾಸಂಗಿಕವಾದ ಮತ್ತು ಆನುಷಂಗಿಕವಾದ ತಿದ್ದುಪಡಿಗಳನ್ನು ಕೂಡ ಮಾಡಲಾಗಿದೆ.

ಆದ್ದರಿಂದ ಈ ವಿಧೇಯಕ.

**ಆರ್ಥಿಕ ಜ್ಞಾಪನ ಪತ್ರ**

ಪ್ರಸ್ತಾವಿತ ಕ್ರಮವು ಯಾವುದೇ ಹೆಚ್ಚಿನ ವೆಚ್ಚವನ್ನು ಒಳಗೊಂಡಿರುವುದಿಲ್ಲ.

**ಪ್ರತ್ಯಾಯೋಜಿತ ಶಾಸನ ರಚನೆಗೆ ಸಂಬಂಧಿಸಿದ ಜ್ಞಾಪನ ಪತ್ರ**

**ಖಂಡ 2(2)–** ವಿಧೇಯಕದ 2(2)ನೇ ಖಂಡದ ಅಡಿಯಲ್ಲಿ ಸೇರಿಸಲಾಗುವ ಕರ್ನಾಟಕ ಮಾರಾಟ ತೆರಿಗೆ ಅಧಿನಿಯಮ, 1957ರ 12ನೇ ಪ್ರಕರಣದ (1) ಮತ್ತು (1–ಎ) ಉಪಪ್ರಕರಣಗಳ ಪರಂತುಕಗಳು, ವಿದ್ಯುನ್ಮಾನ ವಿಧಾನದಲ್ಲಿ ವಿವರಪಟ್ಟಿಯನ್ನು ದಾಖಲು ಮಾಡಬೇಕಾಗಿರುವ ಮತ್ತು ವಿದ್ಯುನ್ಮಾನ ವಿಧಾನದಲ್ಲಿ ತೆರಿಗೆಯನ್ನು ಸಂದಾಯ ಮಾಡಬೇಕಾಗಿರುವ ನೋಂದಾಯಿತ ವ್ಯಾಪಾರಿಗಳ ವರ್ಗವನ್ನು ಅಧಿಸೂಚಿಸಲು ವಾಣಿಜ್ಯ ತೆರಿಗೆ ಆಯುಕ್ತರಿಗೆ ಅಧಿಕಾರ ನೀಡುತ್ತದೆ.

**ಖಂಡ 2(3)–** ವಿಧೇಯಕದ 2(3)ನೇ ಖಂಡದ ಅಡಿಯಲ್ಲಿ ಸೇರಿಸಲಾಗುವ ಕರ್ನಾಟಕ ಮಾರಾಟ ತೆರಿಗೆ ಅಧಿನಿಯಮ, 1957ರ 12–ಬಿ ಪ್ರಕರಣದ (1)ನೇ ಉಪಪ್ರಕರಣದ ಪರಂತುಕವು, ವಿದ್ಯುನ್ಮಾನ ವಿಧಾನದಲ್ಲಿ ವಿವರಪತ್ರವನ್ನು ದಾಖಲು ಮಾಡಬೇಕಾಗಿರುವ ಮತ್ತು ವಿದ್ಯುನ್ಮಾನ ವಿಧಾನದಲ್ಲಿ ತೆರಿಗೆಯನ್ನು ಸಂದಾಯ ಮಾಡಬೇಕಾಗಿರುವ ನೋಂದಾಯಿತ ವ್ಯಾಪಾರಿಗಳ ವರ್ಗವನ್ನು ಅಧಿಸೂಚಿಸಲು ವಾಣಿಜ್ಯ ತೆರಿಗೆ ಆಯುಕ್ತರಿಗೆ ಅಧಿಕಾರ ನೀಡುತ್ತದೆ.

**ಖಂಡ 2(4)–** ವಿಧೇಯಕದ 2(4)ನೇ ಖಂಡದ ಅಡಿಯಲ್ಲಿ ಸೇರಿಸಲಾಗುವ ಕರ್ನಾಟಕ ಮಾರಾಟ ತೆರಿಗೆ ಅಧಿನಿಯಮ, 1957ರ 13ನೇ ಪ್ರಕರಣದ (1)ನೇ ಉಪಪ್ರಕರಣದ ಪರಂತುಕವು, ವಿದ್ಯುನ್ಮಾನ ವಿಧಾನದಲ್ಲಿ ತೆರಿಗೆಯನ್ನು ಮತ್ತು ಬಾಕಿ ಇರುವ ಇತರ ಮೊತ್ತವನ್ನು ಸಂದಾಯ ಮಾಡಬೇಕಾಗಿರುವ ನೋಂದಾಯಿತ ವ್ಯಾಪಾರಿಗಳ ವರ್ಗವನ್ನು ಅಧಿಸೂಚಿಸಲು ವಾಣಿಜ್ಯ ತೆರಿಗೆ ಆಯುಕ್ತರಿಗೆ ಅಧಿಕಾರ ನೀಡುತ್ತದೆ.

**ಖಂಡ 2(5)–** ವಿಧೇಯಕದ 2(5)ನೇ ಖಂಡದ ಅಡಿಯಲ್ಲಿ ಸೇರಿಸಲಾಗುವ ಕರ್ನಾಟಕ ಮಾರಾಟ ತೆರಿಗೆ ಅಧಿನಿಯಮ, 1957ರ 12–ಬಿ ಪ್ರಕರಣದ (3) ಮತ್ತು (4)ನೇ ಉಪಪ್ರಕರಣಗಳ ಪರಂತುಕಗಳು, ವಿದ್ಯುನ್ಮಾನ ವಿಧಾನದಲ್ಲಿ ವಿವರಪಟ್ಟಿಯಲ್ಲಿ ದಾಖಲು ಮಾಡಬೇಕಾಗಿರುವ ಮತ್ತು ವಿದ್ಯುನ್ಮಾನ ವಿಧಾನದಲ್ಲಿ ತೆರಿಗೆಯನ್ನು ಸಂದಾಯ ಮಾಡಬೇಕಾಗಿರುವ ನೋಂದಾಯಿತ ವ್ಯಾಪಾರಿಗಳ ವರ್ಗವನ್ನು ಅಧಿಸೂಚಿಸಲು ವಾಣಿಜ್ಯ ತೆರಿಗೆ ಆಯುಕ್ತರಿಗೆ ಅಧಿಕಾರ ನೀಡುತ್ತದೆ.

**ಖಂಡ 3(1)–** ವಿಧೇಯಕದ 3(1)ನೇ ಖಂಡದ ಅಡಿಯಲ್ಲಿ ಸೇರಿಸಲಾಗುವ ಕರ್ನಾಟಕ ಮನರಂಜನಾ ತೆರಿಗೆ ಅಧಿನಿಯಮ, 1958ರ 6–ಎ ಪ್ರಕರಣದ (1) ಮತ್ತು (1–ಎ) ಉಪಪ್ರಕರಣಗಳ ಪರಂತುಕಗಳು, ವಿದ್ಯುನ್ಮಾನ ವಿಧಾನದಲ್ಲಿ ವಿವರಪಟ್ಟಿಯನ್ನು ದಾಖಲು ಮಾಡಬೇಕಾಗಿರುವ ಮತ್ತು ವಿದ್ಯುನ್ಮಾನ ವಿಧಾನದಲ್ಲಿ ತೆರಿಗೆಯನ್ನು ಸಂದಾಯ ಮಾಡಬೇಕಾಗಿರುವ ಮನರಂಜನಾ ಸಂಸ್ಥೆಗಳ ಮಾಲೀಕರ ವರ್ಗವನ್ನು ಅಧಿಸೂಚಿಸಲು ವಾಣಿಜ್ಯ ತೆರಿಗೆ ಆಯುಕ್ತರಿಗೆ ಅಧಿಕಾರ ನೀಡುತ್ತದೆ.

**ಖಂಡ 3(2)–** ವಿಧೇಯಕದ 3(2)ನೇ ಖಂಡದ ಅಡಿಯಲ್ಲಿ ಸೇರಿಸಲಾಗುವ ಕರ್ನಾಟಕ ಮನರಂಜನಾ ತೆರಿಗೆ ಅಧಿನಿಯಮ, 1958ರ 9ನೇ ಪ್ರಕರಣದ (1)ನೇ ಉಪಪ್ರಕರಣದ ಪರಂತುಕವು, ವಿದ್ಯುನ್ಮಾನ ವಿಧಾನದಲ್ಲಿ ತೆರಿಗೆಯನ್ನು ಮತ್ತು ಬಾಕಿ ಇರುವ ಇತರ ಮೊತ್ತವನ್ನು ಸಂದಾಯ ಮಾಡಬೇಕಾಗಿರುವ ಮನರಂಜನಾ ಸಂಸ್ಥೆಗಳ ಮಾಲೀಕರ ವರ್ಗವನ್ನು ಅಧಿಸೂಚಿಸಲು ವಾಣಿಜ್ಯ ತೆರಿಗೆ ಆಯುಕ್ತರಿಗೆ ಅಧಿಕಾರ ನೀಡುತ್ತದೆ.

**ಖಂಡ 4(1)–** ವಿಧೇಯಕದ 4(1)ನೇ ಖಂಡದ ಅಡಿಯಲ್ಲಿ ಸೇರಿಸಲಾಗುವ ಕರ್ನಾಟಕ ವೃತ್ತಿಗಳು, ವ್ಯಾಪಾರಗಳು, ಆಜೀವಿಕೆಗಳು ಮತ್ತು ಉದ್ಯೋಗಗಳ ಮೇಲಣ ತೆರಿಗೆ ಅಧಿನಿಯಮ, 1976ರ 6ನೇ ಪ್ರಕರಣದ (1) ಮತ್ತು (2)ನೇ ಉಪಪ್ರಕರಣಗಳ ಪರಂತುಕಗಳು, ವಿದ್ಯುನ್ಮಾನ ವಿಧಾನದಲ್ಲಿ ವಿವರಪಟ್ಟಿಯನ್ನು ದಾಖಲು ಮಾಡಬೇಕಾಗಿರುವ ಮತ್ತು ವಿದ್ಯುನ್ಮಾನ ವಿಧಾನದಲ್ಲಿ ತೆರಿಗೆಯನ್ನು ಸಂದಾಯ ಮಾಡಬೇಕಾಗಿರುವ ನಿಯೋಜಕರ ವರ್ಗವನ್ನು ಅಧಿಸೂಚಿಸಲು ವಾಣಿಜ್ಯ ತೆರಿಗೆ ಆಯುಕ್ತರಿಗೆ ಅಧಿಕಾರ ನೀಡುತ್ತದೆ.

**ಖಂಡ 4(2)–** ವಿಧೇಯಕದ 4(2)ನೇ ಖಂಡದ ಅಡಿಯಲ್ಲಿ ಸೇರಿಸಲಾಗುವ ಕರ್ನಾಟಕ ವೃತ್ತಿಗಳು, ವ್ಯಾಪಾರಗಳು, ಆಜೀವಿಕೆಗಳು ಮತ್ತು ಉದ್ಯೋಗಗಳ ಮೇಲಣ ತೆರಿಗೆ ಅಧಿನಿಯಮ, 1976ರ 6–ಎ ಪ್ರಕರಣದ (1) ಮತ್ತು (2)ನೇ ಉಪಪ್ರಕರಣಗಳ ಪರಂತುಕಗಳು, ವಿದ್ಯುನ್ಮಾನ ವಿಧಾನದಲ್ಲಿ ವಿವರಪಟ್ಟಿಯನ್ನು ದಾಖಲು ಮಾಡಬೇಕಾಗಿರುವ ಮತ್ತು ವಿದ್ಯುನ್ಮಾನ ವಿಧಾನದಲ್ಲಿ ತೆರಿಗೆಯನ್ನು ಸಂದಾಯ ಮಾಡಬೇಕಾಗಿರುವ ನಿಯೋಜಕರ ವರ್ಗವನ್ನು ಅಧಿಸೂಚಿಸಲು ವಾಣಿಜ್ಯ ತೆರಿಗೆ ಆಯುಕ್ತರಿಗೆ ಅಧಿಕಾರ ನೀಡುತ್ತದೆ.

**ಖಂಡ 4(3)–** ವಿಧೇಯಕದ 4(3)ನೇ ಖಂಡದ ಅಡಿಯಲ್ಲಿ ಸೇರಿಸಲಾಗುವ ಕರ್ನಾಟಕ ವೃತ್ತಿಗಳು, ವ್ಯಾಪಾರಗಳು, ಆಜೀವಿಕೆಗಳು ಮತ್ತು ಉದ್ಯೋಗಗಳ ಮೇಲಣ ತೆರಿಗೆ ಅಧಿನಿಯಮ, 1976ರ 10ನೇ ಪ್ರಕರಣದ (1) ಮತ್ತು (5)ನೇ ಉಪಪ್ರಕರಣಗಳ ಪರಂತುಕಗಳು, ವಿದ್ಯುನ್ಮಾನ ವಿಧಾನದಲ್ಲಿ ವಿವರಪತ್ರವನ್ನು ದಾಖಲು ಮಾಡಬೇಕಾಗಿರುವ ಮತ್ತು ವಿದ್ಯುನ್ಮಾನ ವಿಧಾನದಲ್ಲಿ ತೆರಿಗೆಯನ್ನು ಸಂದಾಯ ಮಾಡಬೇಕಾಗಿರುವ ಪಟ್ಟಿಯಲ್ಲಿ ಸೇರಿರುವ ವ್ಯಕ್ತಿಗಳ ಮತ್ತು ಇತರ ವ್ಯಕ್ತಿಗಳ ವರ್ಗವನ್ನು ಅಧಿಸೂಚಿಸಲು ವಾಣಿಜ್ಯ ತೆರಿಗೆ ಆಯುಕ್ತರಿಗೆ ಅಧಿಕಾರ ನೀಡುತ್ತದೆ.

**ಖಂಡ 5(2)–** ವಿಧೇಯಕದ 5(2)ನೇ ಖಂಡದ ಅಡಿಯಲ್ಲಿ ಸೇರಿಸಲಾಗುವ ಕರ್ನಾಟಕ ವಿಲಾಸಗಳ ಮೇಲೆ ತೆರಿಗೆ ಅಧಿನಿಯಮ, 1979ರ 5ನೇ ಪ್ರಕರಣದ (1) ಮತ್ತು (2)ನೇ ಉಪಪ್ರಕರಣಗಳ ಪರಂತುಕಗಳು, ವಿದ್ಯುನ್ಮಾನ ವಿಧಾನದಲ್ಲಿ ವಿವರಪಟ್ಟಿಯನ್ನು ದಾಖಲು ಮಾಡಬೇಕಾಗಿರುವ ಮತ್ತು ವಿದ್ಯುನ್ಮಾನ ವಿಧಾನದಲ್ಲಿ ತೆರಿಗೆಯನ್ನು ಸಂದಾಯ ಮಾಡಬೇಕಾಗಿರುವ ಮಾಲೀಕರ ವರ್ಗವನ್ನು ಅಧಿಸೂಚಿಸಲು ವಾಣಿಜ್ಯ ತೆರಿಗೆ ಆಯುಕ್ತರಿಗೆ ಅಧಿಕಾರ ನೀಡುತ್ತದೆ.

**ಖಂಡ 5(3)–** ವಿಧೇಯಕದ 5(3)ನೇ ಖಂಡದ ಅಡಿಯಲ್ಲಿ ಸೇರಿಸಲಾಗುವ ಕರ್ನಾಟಕ ವಿಲಾಸಗಳ ಮೇಲೆ ತೆರಿಗೆ ಅಧಿನಿಯಮ, 1979ರ 5–ಎ ಪ್ರಕರಣದ (1) ಮತ್ತು (2)ನೇ ಉಪಪ್ರಕರಣಗಳ ಪರಂತುಕಗಳು, ವಿದ್ಯುನ್ಮಾನ ವಿಧಾನದಲ್ಲಿ ವಿವರಪತ್ರವನ್ನು ದಾಖಲು ಮಾಡಬೇಕಾಗಿರುವ ಮತ್ತು ವಿದ್ಯುನ್ಮಾನ ವಿಧಾನದಲ್ಲಿ ತೆರಿಗೆಯನ್ನು ಸಂದಾಯ ಮಾಡಬೇಕಾಗಿರುವ ಮಾಲೀಕರ ವರ್ಗವನ್ನು ಅಧಿಸೂಚಿಸಲು ವಾಣಿಜ್ಯ ತೆರಿಗೆ ಆಯುಕ್ತರಿಗೆ ಅಧಿಕಾರ ನೀಡುತ್ತದೆ.

**ಖಂಡ 6(1)–** ವಿಧೇಯಕದ 6(1)ನೇ ಖಂಡದ ಅಡಿಯಲ್ಲಿ ಸೇರಿಸಲಾಗುವ ಕರ್ನಾಟಕ ಸರಕುಗಳ ಪ್ರವೇಶದ ಮೇಲಣ ತೆರಿಗೆ ಅಧಿನಿಯಮ, 1979ರ 5ನೇ ಪ್ರಕರಣದ (1) ಮತ್ತು (2)ನೇ ಉಪಪ್ರಕರಣಗಳ ಪರಂತುಕಗಳು, ವಿದ್ಯುನ್ಮಾನ ವಿಧಾನದಲ್ಲಿ ವಿವರಪಟ್ಟಿಯನ್ನು ದಾಖಲು ಮಾಡಬೇಕಾಗಿರುವ ಮತ್ತು ವಿದ್ಯುನ್ಮಾನ ವಿಧಾನದಲ್ಲಿ ತೆರಿಗೆಯನ್ನು ಸಂದಾಯ ಮಾಡಬೇಕಾಗಿರುವ ವ್ಯಾಪಾರಿಗಳ ವರ್ಗವನ್ನು ಅಧಿಸೂಚಿಸಲು ವಾಣಿಜ್ಯ ತೆರಿಗೆ ಆಯುಕ್ತರಿಗೆ ಅಧಿಕಾರ ನೀಡುತ್ತದೆ.

**ಖಂಡ 6(2)–** ವಿಧೇಯಕದ 6(2)ನೇ ಖಂಡದ ಅಡಿಯಲ್ಲಿ ಸೇರಿಸಲಾಗುವ ಕರ್ನಾಟಕ ಸರಕುಗಳ ಪ್ರವೇಶದ ಮೇಲಣ ತೆರಿಗೆ ಅಧಿನಿಯಮ, 1979ರ 7ನೇ ಪ್ರಕರಣದ (1)ನೇ ಉಪಪ್ರಕರಣದ ಪರಂತುಕವು, ವಿದ್ಯುನ್ಮಾನ ವಿಧಾನದಲ್ಲಿ ವಿವರಪಟ್ಟಿಯಲ್ಲಿ ದಾಖಲು ಮಾಡಬೇಕಾಗಿರುವ ಮತ್ತು ವಿದ್ಯುನ್ಮಾನ ವಿಧಾನದಲ್ಲಿ ತೆರಿಗೆಯನ್ನು ಸಂದಾಯ ಮಾಡಬೇಕಾಗಿರುವ ವ್ಯಾಪಾರಿಗಳ ವರ್ಗವನ್ನು ಅಧಿಸೂಚಿಸಲು ವಾಣಿಜ್ಯ ತೆರಿಗೆ ಆಯುಕ್ತರಿಗೆ ಅಧಿಕಾರ ನೀಡುತ್ತದೆ.

**ಖಂಡ 6(3)–** ವಿಧೇಯಕದ 6(3)ನೇ ಖಂಡದ ಅಡಿಯಲ್ಲಿ ಸೇರಿಸಲಾಗುವ ಕರ್ನಾಟಕ ಸರಕುಗಳ ಪ್ರವೇಶದ ಮೇಲಣ ತೆರಿಗೆ ಅಧಿನಿಯಮ, 1979ರ 8ನೇ ಪ್ರಕರಣದ (1)ನೇ ಉಪಪ್ರಕರಣದ ಪರಂತುಕವು, ವಿದ್ಯುನ್ಮಾನ ವಿಧಾನದಲ್ಲಿ ತೆರಿಗೆಯನ್ನು ಮತ್ತು ಬಾಕಿ ಇರುವ ಇತರ ಮೊತ್ತವನ್ನು ಸಂದಾಯ ಮಾಡಬೇಕಾಗಿರುವ ವ್ಯಾಪಾರಿಗಳ ವರ್ಗವನ್ನು ಅಧಿಸೂಚಿಸಲು ವಾಣಿಜ್ಯ ತೆರಿಗೆ ಆಯುಕ್ತರಿಗೆ ಅಧಿಕಾರ ನೀಡುತ್ತದೆ.

**ಖಂಡ 6(4)–** ವಿಧೇಯಕದ 6(4)ನೇ ಖಂಡದ ಅಡಿಯಲ್ಲಿ ಸೇರಿಸಲಾಗುವ ಕರ್ನಾಟಕ ಸರಕುಗಳ ಪ್ರವೇಶದ ಮೇಲಣ ತೆರಿಗೆ ಅಧಿನಿಯಮ, 1979ರ ಹೊಸ 8–ಬಿ ಪ್ರಕರಣದ (3) ಮತ್ತು (4)ನೇ ಉಪಪ್ರಕರಣಗಳು, ಸಕ್ಕರೆಯ ಉತ್ಪಾದಕನಿಗೆ ಸಂದಾಯ ಮಾಡಿದ ತೆರಿಗೆಯ ವಿವರಗಳನ್ನು ಯಾವ ವಿವರ ಪತ್ರದ ನಮೂನೆಯಲ್ಲಿ ಸಕ್ಕರೆಯ ಉತ್ಪಾದಕನು ಘೋಷಿಸಬೇಕಾಗಿದೆಯೋ ಆ ವಿವರಪತ್ರದ ನಮೂನೆಯನ್ನು, ಅದರಲ್ಲಿ ಯಾವ ಪ್ರಾಧಿಕಾರಿಗೆ ಸಲ್ಲಿಸಬೇಕೋ ಆ ಪ್ರಾಧಿಕಾರಿಯನ್ನು, ಖರೀದಿಸುವ ವ್ಯಾಪಾರಿಯು ಅವನಿಗೆ ತೆರಿಗೆಯನ್ನು ಸಂದಾಯ ಮಾಡಿದ ಬಗ್ಗೆ ಅಂಥ ಉತ್ಪಾದಕನು ನೀಡಬೇಕಾದ ಪ್ರಮಾಣ ಪತ್ರದ ನಮೂನೆಯನ್ನು ಗೊತ್ತುಪಡಿಸಲು ರಾಜ್ಯ ಸರ್ಕಾರಕ್ಕೆ ಅಧಿಕಾರ ನೀಡುತ್ತದೆ. ಹೊಸ 8–ಬಿ ಪ್ರಕರಣದ (3)ನೇ ಉಪಪ್ರಕರಣದ ಪರಂತುಕವು, ವಿದ್ಯುನ್ಮಾನ ವಿಧಾನದಲ್ಲಿ ವಿವರಪಟ್ಟಿಯನ್ನು ದಾಖಲು ಮಾಡಬೇಕಾಗಿರುವ ಮತ್ತು ವಿದ್ಯುನ್ಮಾನ ವಿಧಾನದಲ್ಲಿ ತೆರಿಗೆಯನ್ನು ಸಂದಾಯ ಮಾಡಬೇಕಾಗಿರುವ ಉತ್ಪಾದಕರ ವರ್ಗವನ್ನು ಅಧಿಸೂಚಿಸಲು ಸಹ ವಾಣಿಜ್ಯ ತೆರಿಗೆ ಆಯುಕ್ತರಿಗೆ ಅಧಿಕಾರ ನೀಡುತ್ತದೆ.

ಪ್ರಸ್ತಾವಿತ ಶಾಸನಾತ್ಮಕ ಅಧಿಕಾರದ ಪ್ರತ್ಯಾಯೋಜನೆಯು ವಾಡಿಕೆಯ ಸ್ವರೂಪದ್ದಾಗಿದೆ.

**ಬಿ.ಎಸ್. ಯಡಿಯೂರಪ್ಪ**
ಮುಖ್ಯಮಂತ್ರಿಗಳು ಮತ್ತು
ಆರ್ಥಿಕ ಸಚಿವರು

**ಎಸ್.ಬಿ. ಪಾಟೀಲ್**
ಕಾರ್ಯದರ್ಶಿ
ಕರ್ನಾಟಕ ವಿಧಾನ ಸಭೆ

## ಅನುಬಂಧ

**ಕರ್ನಾಟಕ ತೆರಿಗೆ ಕಾನೂನುಗಳ (ತಿದ್ದುಪಡಿ) ವಿಧೇಯಕ, 2010ರ (1957ರ ಕರ್ನಾಟಕ ಅಧಿನಿಯಮ 25) ಉದ್ಧೃತ ಭಾಗ**

xx xx xx

**2. ಪರಿಭಾಷೆಗಳು.–** (1) ಈ ಅಧಿನಿಯಮದಲ್ಲಿ ಸಂದರ್ಭವು ಅನ್ಯಥಾ ಅಗತ್ಯಪಡಿಸಿದ ಹೊರತು,–

(ಎ) ವ್ಯಾಕರಣ ವ್ಯತ್ಯಾಸಗಳೊಡನೆ "ಕೃಷಿ" ಎಂಬುದು ತೋಟಗಾರಿಕೆ, ಬೆಳೆಗಳು, ಹುಲ್ಲು ಅಥವಾ ತೋಟದ ಉತ್ಪನ್ನಗಳನ್ನು ಬೆಳೆಸುವುದು ಮತ್ತು ಜಾನುವಾರು ಮೇಯಿಸುವುದನ್ನು ಒಳಗೊಳ್ಳುತ್ತದೆ. ಆದರೆ ಇದು ಹಾಲು ಉತ್ಪಾದನೆ, ವ್ಯವಸಾಯ, ಕೋಳಿ ಸಾಕಣೆ ಜಾನುವಾರು ತಳಿವರ್ಧನೆ ಮತ್ತು ಕೇವಲ ಮರವನ್ನು ಕಡಿಯುವುದನ್ನು ಒಳಗೊಳ್ಳುವುದಿಲ್ಲ.

xx xx xx

(ಕೆ) "ವ್ಯವಹಾರಿ" ಎಂದರೆ, ನಗದಿಗಾಗಿಯೇ ಆಗಲಿ ಅಥವಾ ಮುಂದಕ್ಕೆ ಹಾಕಲಾದ ಸಂದಾಯಕ್ಕೆ ಆಗಳಿ ಅಥವಾ ರುಸುಮು, ಪರಿಶ್ರಮಧನ ಅಥವಾ ಇತರ ಬೆಲೆಯುಳ್ಳ ಪ್ರತಿಫಲಕ್ಕಾಗಿ ಆಗಲಿ ನೇರವಾಗಿ ಅಥವಾ ಅನ್ಯಥಾ ಸರಕುಗಳನ್ನು ಖರೀದಿಸುವ ಮಾರಾಟ ಮಾಡುವ, ಸರಬರಾಜು ಮಾಡುವ, ಅಥವಾ ವಿತರಣೆ ಮಾಡುವ ವ್ಯವಹಾರವನ್ನು ನಡೆಸುತ್ತಿರುವ ಯಾವನೇ ವ್ಯಕ್ತಿ ಮತ್ತು ಅದು

(i) ಕರ್ನಾಟಕ ಸರ್ಕಾರ , ಕೇಂದ್ರ ಸರ್ಕಾರ, ಕರ್ನಾಟಕ ರಾಜ್ಯವನ್ನು ಹೊರತುಪಡಿಸಿ ಇತರ ಯಾವುದೇ ರಾಜ್ಯದ ರಾಜ್ಯ ಸರ್ಕಾರ, ಸ್ಥಳೀಯ ಪ್ರಾಧಿಕಾರ, ಕಂಪನಿ, ಹಿಂದೂ ಅವಿಭಕ್ತ ಕುಟುಂಬ, ಆಳಿಯ ಸಂತಾನ ಕುಟುಂಬ, ಫರ್ಮ ಸೊಸೈಟಿ ಕ್ಲಬ್ ಅಥವಾ ಅಂಥ ವ್ಯವಹಾರವನ್ನು ನಡೆಸುತ್ತಿರುವ ಸಂಘದ ಯಾವುದೇ ಔದ್ಯಮಿಕ, ವಾಣಿಜ್ಯ ಅಥವಾ ವ್ಯಾಪಾರಿ ಉದ್ಯಮ;

(ii) xx xx xx

(iii) xx xx xx

(iv) xx xx xx

(v) xx xx xx

(vi) ಅಂತಹ ವ್ಯವಹಾರವನ್ನು ನಡೆಸುತ್ತಿರುವ ಗಿರಣಿದಾರ;

xx xx xx

(ಟಿ) ಅದರ ಎಲ್ಲಾ ವ್ಯಾಕರಣ ವ್ಯತ್ಯಾಸಗಳು ಮತ್ತು ಸಜಾತಿಯ ಪದಾವಳಿಗಳೊಂದಿಗೆ "ಮಾರಾಟ" ಎಂದರೆ, ನಗದಿಗಾಗಿ ಅಥವಾ ಮುಂದಕ್ಕೆ ಹಾಕಲಾದ ಸಂದಾಯಕ್ಕಾಗಿ ಅಥವಾ ಬೆಲೆಯುಳ್ಳ ಪ್ರತಿಫಲಕ್ಕಾಗಿ ವ್ಯಾಪಾರ ಅಥವಾ ವ್ಯವಹಾರ ಕ್ರಮದಲ್ಲಿ ಒಬ್ಬ ವ್ಯಕ್ತಿಯು ಇನ್ನೊಬ್ಬನಿಗೆ ಮಾಡುವ ಸರಕುಗಳಲ್ಲಿ ಸ್ವಾಮ್ಯ (ಅಡಮಾನ, ಆಧಾರ ಅಥವಾ ಒತ್ತೆಯಲ್ಲದ ಅನ್ಯಥಾ)ದ ಪ್ರತಿಯೊಂದು ವರ್ಗಾವಣೆ ಮತ್ತು

(i) ನಗದು, ಮುಂದಕ್ಕೆ ಹಾಕಿದ ಸಂದಾಯ ಅಥವಾ ಇತರ ಬೆಲೆಯುಳ್ಳ ಪ್ರತಿಫಲಕ್ಕಾಗಿ ಯಾವುವೇ ಸರಕುಗಳಲ್ಲಿ ಸ್ವತ್ತಿನ ಕರಾರಿನ ಅನುಸರಣೆಯಲ್ಲಿ ಅಲ್ಲದ ಅನ್ಯಥಾ ವರ್ಗಾವಣೆ;

(ii) xx xx xx

(iii) xx xx xx

(iv) ನಗದು ಮುಂದಕ್ಕೆ ಹಾಕಿದ ಸಂದಾಯ ಅಥವಾ ಇತರ ಬೆಲೆಯುಳ್ಳ ಪ್ರತಿಫಲಕ್ಕಾಗಿ ಯಾವುದೇ ಉದ್ದೇಶಕ್ಕಾಗಿ (ನಿರ್ದಿಷ್ಟ ಅವಧಿಗಾಗಲಿ ಅಥವಾ ಇಲ್ಲದಿರಲಿ) ಯಾವುದೇ ಸರಕುಗಳ ಉಪಯೋಗದ ಹಕ್ಕಿನ ವರ್ಗಾವಣೆ;

\- ಇವುಗಳನ್ನು ಒಳಗೊಳ್ಳುತ್ತದೆ.

**ವಿವರಣೆ–1** ಸೊಸೈಟಿಯ (ಸಹಕಾರಿ ಸಂಘ ಸೇರಿದಂತೆ) ಕ್ಲಬ್, ಫರ್ಮ್ ಅಥವಾ ಯಾವುದೇ ಸಂಘವು ಅದರ ಸದಸ್ಯರುಗಳಿಗೆ ವ್ಯವಹಾರದ ಕ್ರಮದಲ್ಲಿಯೇ ಆಗಲಿ ಅಥವಾ ಅವಿಲ್ಲದೇ ನಗದಿಗಾಗಿ ಅಥವಾ ಮುಂದಕ್ಕೆ ಹಾಕಿದ ಸಂದಾಯಕ್ಕಾಗಿ ಅಥವಾ ಇತರ ಬೆಲೆ ಬಾಳುವ ಪ್ರತಿಫಲಕ್ಕಾಗಿ ಮಾಡುವ ಸರಕುಗಳ ಸರಬರಾಜು ಅಥವಾ ವಿತರಣೆಯಲ್ಲಿ ಒಳಗೊಂಡಿರುವ ಸ್ವತ್ತಿನ ವರ್ಗಾವಣೆಯನ್ನು ಈ ಅಧಿನಿಯಮದ ಉದ್ದೇಶಗಳಿಗಾಗಿ ಮಾರಾಟವಾಗಿರುವುದಾಗಿ ಭಾವಿಸತಕ್ಕದ್ದು.

xx xx xx

**ವಿವರಣೆ 3ಎ.–** ಆಹಾರವಾಗಿರುವ ಅಥವಾ ಮಾನವ ಬಳಕೆಗಾಗಿನ ಯಾವುದೇ ಇತರ ವಸ್ತು ಅಥವಾ ಯಾವುದೇ ಪೇಯ (ಅದು ಮಾದಕದ್ದಾಗಿರಲಿ ಅಥವಾ ಆಲ್ಲದಿರಲಿ) ಸರಕುಗಳನ್ನು ಯಾವುದೇ ಸೇವೆಯ ರೂಪ ಅಥವಾ ಅದರ ಒಂದು ಭಾಗದ ಮೂಲಕ ಅಥವಾ ಸರಬರಾಜಿನ ಪ್ರತಿಯೊಂದು ವ್ಯವಹಾರವು, ಅಂತಹ ಸರಬರಾಜು ಅಥವಾ ಸೇವೆಯು ನಗದಿಗಾಗಿ ಅಥವಾ ಮುಂದಕ್ಕೆ ಹಾಕಿದ ಸಂದಾಯ ಅಥವಾ ಇತರ ಬೆಲೆಬಾಳುವ ಪ್ರತಿಫಲಕ್ಕಾಗಿ ಇರುವಲ್ಲಿ ಆ ಸರಕುಗಳನ್ನು ಸರಬರಾಜು ಮತ್ತು ಖರೀದಿ ಮಾಡುವ ವ್ಯಕ್ತಿಯಿಂದ ಅಂಥ ಸರಬರಾಜನ್ನು ಯಾರಿಗೆ ಮಾಡಲಾಗಿದೆಯೋ ಆ ವ್ಯಕ್ತಿಗೆ ಮಾಡಿದ ಮಾರಾಟವೆಂದು ಭಾವಿಸತಕ್ಕದ್ದು.

xx xx xx

**12. ವಿವರ ಪಟ್ಟಿಗಳು ಮತ್ತು ನಿರ್ಧರಣೆ.–** (1) 12–ಬಿ ಪ್ರಕರಣದಲ್ಲಿ ಏನೇ ಇದ್ದರೂ, ಪತಿಯೊಬ್ಬ ನೋಂದಾಯಿತ ವ್ಯವಹಾರಿಯು ಮತ್ತು 10ನೇ ಪ್ರಕರಣದ (1) ಮತ್ತು (2)ನೆ ಉಪ ಪ್ರಕರಣದ ಮೇರೆಗೆ ನೋಂದಣಿಗೆ ಒಳಪಡತಕ್ಕ ಪ್ರತಿಯೊಬ್ಬ

ವ್ಯವಹಾರಿಯು ನಿಯಮಿಸಬಹುದಾದಂಥ ರೀತಿಯಲ್ಲಿ ಮತ್ತು ಅಂಥ ಅವಧಿಯೊಳಗೆ ತನ್ನ ಮಾರಾಟ ಹಣದ ಸಂಬಂಧದಲ್ಲಿ ವಿವರಪಟ್ಟಿಕೆ ಅಥವಾ ವಿವರ ಪಟ್ಟಿಕೆಗಳನ್ನು ಸಲ್ಲಿಸತಕ್ಕದ್ದು.

(1ಎ) (1)ನೆ ಉಪ ಪ್ರಕರಣದ ಮೇರೆಗೆ ಯಾವುದೇ ವಿವರಪಟ್ಟಿಕೆಯನ್ನು ಯಾವನೇ ವ್ಯವಹಾರಿಯು ಒಪ್ಪಿಸುವುದಕ್ಕೆ ಮುಂಚೆ ಅವನು ನಿಯಮಿಸಿದ ರೀತಿಯಲ್ಲಿ ಮುಂಗಡವಾಗಿ 13–ಬಿ ಪ್ರಕರಣದ ಮೇರೆಗೆ ಈಗಾಗಲೇ ಸಂದಾಯ ಮಾಡಿದ ಯಾವುದೇ ತೆರಿಗೆಯನ್ನು ಕಡಿಮೆ ಮಾಡಿದಂತೆ ಅಂಥ ವಿವರಪಟ್ಟಿಕೆಯ ಆಧಾರದ ಮೇಲೆ ಅವನು ಸಂದಾಯ ಮಾಡಬೇಕಾದ ತೆರಿಗೆಯ ಪೂರ್ಣ ಮೊಬಲಗನ್ನು ಸಂದಾಯ ಮಾಡತಕ್ಕದ್ದು ಮತ್ತು ಅಂಥ ತೆರಿಗೆಯ ಸಂದಾಯದ ತೃಪ್ತಿಕರ ರುಜುವಾತನ್ನು ವಿವರಪಟ್ಟಿಕೆಯೊಂದಿಗೆ ಒದಗಿಸತಕ್ಕದ್ದು ಮತ್ತು ಹಾಗೆ ಸಂದಾಯ ಮಾಡಬೇಕಾದ ತೆರಿಗೆಯನ್ನು, 13ನೇ ಪ್ರಕರಣದ ಉದ್ದೇಶಗಳಿಗಾಗಿ ಅಂಥ ವ್ಯವಹಾರಿಯಿಂದ ಈ ಅಧಿನಿಯಮದ ಮೇರೆಗೆ ಬಾಕಿಯಾಗುವ ತೆರಿಗೆ ಎಂಬುದಾಗಿ ಭಾವಿಸತಕ್ಕದ್ದು. ಅಂತಿಮ ನಿರ್ಧರಣೆಯನ್ನು ಮಾಡಿದ ತರುವಾಯ ಹಾಗೆ ಸಂದಾಯ ಮಾಡಿದ ತೆರಿಗೆಯ ಮೊಬಲಗನ್ನು ನಿರ್ಧರಿಸಿದ ತೆರಿಗೆಯ ಬಗ್ಗೆ ಸಂದಾಯ ಮಾಡಲಾಗಿದೆ ಎಂಬುದಾಗಿ ಭಾವಿಸತಕ್ಕದ್ದು.

**xx** **xx** **xx**

**12ಬಿ. ಮುಂಗಡವಾಗಿ ತೆರಿಗೆಯ ಸಂದಾಯ.–** (1) ನಿಯಮಿಸಬಹುದಾದಂತಹ ನಿಯಮಗಳಿಗೆ ಒಳಪಟ್ಟು, ಪ್ರತಿಯೊಬ್ಬ ವ್ಯವಹಾರಿಯು, ಹಿಂದಿನ ತಿಂಗಳಲ್ಲಿನ ತೆರಿಗೆಗೆ ಗುರಿಯಾಗಬಹುದಾದ ಮಾರಾಟದ ಹಣವನ್ನು ಒಳಗೊಂಡು ನಿಯಮಿಸಬಹುದಾದಂಥ ವಿವರಗಳನ್ನು ಒಳಗೊಂಡಿರುವ ವಿವರಪತ್ರವನ್ನು ಪ್ರತಿ ತಿಂಗಳು ಕಳುಹಿಸತಕ್ಕದ್ದು ಮತ್ತು ಈ ಅಧಿನಿಯಮದ ಮೇರೆಗೆ ಅಂಥ ತೆರಿಗೆಯು ಸಂಬಂಧಪಡುವಂತಹ ಹಿಂದಿನ ತಿಂಗಳ ಮುಕ್ತಾಯದ ತರುವಾಯ ಇಪ್ಪತ್ತು ದಿನಸಗಳೊಳಗೆ ವಿವರ ಪತ್ರದಲ್ಲಿ ತೋರಿಸಿದ ಮಾರಾಟದ ಹಣದ ವಿವರಗಳ ಆಧಾರದ ಮೇಲೆ ಅವನು ಸಂದಾಯ ಮಾಡಬೇಕಾದ ತೆರಿಗೆಯ ಪೂರ್ಣ ಮೊಬಲಗನ್ನು ಮುಂಗಡವಾಗಿ ಸಂದಾಯ ಮಾಡತಕ್ಕದ್ದು ಮತ್ತು ಹಾಗೆ ಸಂದಾಯ ಮಾಡಬೇಕಾದ ಮೊಬಲಗನ್ನು 13ನೇ ಪ್ರಕರಣದ ಉದ್ದೇಶಗಳಿಗಾಗಿ ಅಂತಹ ವ್ಯವಹಾರಿಯಿಂದ ಈ ಅಧಿನಿಯಮದ ಮೇರೆಗೆ ಬಾಕಿಯಾಗುವ ಮೊಬಲಗು ಎಂಬುದಾಗಿ ಭಾವಿಸತಕ್ಕದ್ದು.

ಪರಂತು,–

(i) 17ನೇ ಪ್ರಕಣದ (1)ನೇ ಉಪ–ಪ್ರಕರಣದ ರಾಜು ಮೂಲಕದ ಸಂದಾಯಕ್ಕೆ ಒಪ್ಪಿಕೊಂಡ ವ್ಯವಹಾರಿಯ ಸಂದರ್ಭದಲ್ಲಿ (1)ನೆ ಉಪ–ಪ್ರಕರಣದ ಉಪಬಂಧಗಳು ಅನ್ವಯ ವಾಗತಕ್ಕದ್ದಲ್ಲ; ಮತ್ತು

(ii) ಕರ್ನಾಟಕ ಸರ್ಕಾರದ ಕೈಗಾರಿಕೆ ಮತ್ತು ವಾಣಿಜ್ಯ ನಿರ್ದೇಶಕರಲ್ಲಿ ನೋಂದಾಯಿಸಿರುವ ಸಣ್ಣ ಪ್ರಮಾಣದ ಕೈಗಾರಿಕೆಯಾಗಿರುವ ವ್ಯಾಪಾರಿಯ ಸಂದರ್ಭದಲ್ಲಿ, ಅಂಥ ವ್ಯಾಪಾರಿಯು (1)ನೇ ಉಪಪ್ರಕರಣಕ್ಕೆ ಅನುಸಾರವಾಗಿ ಅಂಥ ವಿವರಪತ್ರವನ್ನು ಕಳುಹಿಸತಕ್ಕದ್ದು ಆದರೆ ಪ್ರತಿಯೊಂದು ತ್ರೈಮಾಸಿಕಕ್ಕಾಗಿ ಸಂದಾಯ ಮಾಡಬೇಕಾದ ತೆರಿಗೆಯ ಪೂರ್ಣ ಮೊಬಲಗನ್ನು ಮುಂಗಡವಾಗಿ ಆ ತ್ರೈಮಾಸಿಕವು ಮುಕ್ತಾಯವಾದ ತರುವಾಯ ಇಪ್ಪತ್ತು ದಿನಗಳೊಳಗಾಗಿ ಸಂದಾಯ ಮಾಡತಕ್ಕದ್ದು;

(iii) ಯಾವ ವ್ಯಾಪಾರಿಯು ಯಾವುದೇ ವರ್ಷದಲ್ಲಿನ ಒಟ್ಟು ವಹಿವಾಟು ಏಳು ಲಕ್ಷ ಐವತ್ತು ಸಾವಿರ ರೂಪಾಯಿಗಳನ್ನು ಮೀರಿಲ್ಲವೋ ಆ ವ್ಯಾಪಾರಿಯು ಸಂದರ್ಭದಲ್ಲಿ , (1)ನೇ ಉಪಪ್ರಕರಣಕ್ಕೆ ಅನುಸಾರವಾಗಿ ಪ್ರತಿ ತಿಂಗಳ ವಿವರ ಪತ್ರವನ್ನು ತ್ರೈಮಾಸಿಕದಲ್ಲಿ ಒಮ್ಮೆ ಸಲ್ಲಿಸತಕ್ಕದ್ದು. ಮತ್ತು ಪ್ರತಿ ತ್ರೈಮಾಸಿಕಕ್ಕಾಗಿ ಸಂದಾಯ ಮಾಡಬೇಕಾದ ತೆರಿಗೆಯ ಪೂರ್ಣ ಮೊಬಲಗನ್ನು, ಮುಂಗಡವಾಗಿ, ಅಂಥ ತೆರಿಗೆಯ ಸಂಬಂಧಪಡುವ ಆ ತ್ರೈಮಾಸಿಕವು ಮುಕ್ತಾಯವಾದ ತರುವಾಯ ಇಪ್ಪತ್ತು ದಿನಗಳೊಳಗಾಗಿ ಸಂದಾಯ ಮಾಡತಕ್ಕದ್ದು.

ಮತ್ತೂ ಪರಂತು, ವ್ಯಾಪಾರಿಯು ವರ್ಷಕ್ಕಾಗಿ ಮುಂಗಡವಾಗಿ ಸಂದಾಯ ಮಾಡಬೇಕಾದ ತೆರಿಗೆಯ ಪೂರ್ಣ ಮೊಬಲಗನ್ನು, ಈ ಪ್ರಕರಣದ ಮೇರೆಗೆ ಈಗಾಗಲೇ ಸಂದಾಯ ಮಾಡಿದ ತೆರಿಗೆಯ ಮೊಬಲಗಿನಷ್ಟು ಕಡಿಮೆ ಮಾಡಿ, ಅಂಥ ತೆರಿಗೆಯ ಸಂಬಂಧ ಪಡುವ ವರ್ಷವು ಮುಕ್ತಾಯವಾದ ತರುವಾಯ ಮೂವತ್ತು ದಿನಗಳೊಳಗಾಗಿ ಸಂದಾಯ ಮಾಡತಕ್ಕದ್ದು:

ಅಲ್ಲದೆ ಪರಂತು, ಸಣ್ಣ ಕೈಗಾರಿಕೋದ್ಯಮವು ಯಾವುದೇ ತ್ರೈಮಾಸಿಕಕ್ಕಾಗಿ ಸಂದಾಯ ಮಾಡಬೇಕಾಗಿರುವ ತೆರಿಗೆಯನ್ನು, ಅಂಥ ತೆರಿಗೆಯ ಸಂಬಂಧಪಡುವ ತ್ರೈಮಾಸಿಕವು ಮುಕ್ತಾಯವಾದ ತರುವಾಯ ಮೂವತ್ತು ದಿನಗಳೊಳಗಾಗಿ ಸಂದಾಯ ಮಾಡಿದಿದ್ದರೆ, ಅಂಥ ಉದ್ಯಮವು, ಮೊದಲನೇ ಪರಂತುಕವನ್ನು ಹೊರತುಪಡಿಸಿ, ಈ ಉಪಪ್ರಕರಣದ ಮೇರೆಗೆ ಉಪಬಂಧಿಸಲಾದಂತೆ ಆ ತರುವಾಯ ತೆರಿಗೆಯನ್ನು ಸಂದಾಯ ಮಾಡಲು ಹೊಣೆಯಾಗಿರತಕ್ಕದ್ದು.

**xx** **xx** **xx**

**13. ತೆರಿಗೆ ಸಂದಾಯ ಮತ್ತು ವಸೂಲಿ.–** ಈ ಅಧಿನಿಯಮದ ಮೇರೆಗೆ ಬಾಕಿ ಇರುವ ಯಾವುದೇ ತೆರಿಗೆಯನ್ನು ಅಥವಾ ಯಾವುದೇ ಇತರ ಮೊಬಲಗನ್ನು ನಿಯಮಿಸಬಹುದಾದಂಥ ರೀತಿಯಲ್ಲಿ, ಅಷ್ಟು ಕಂತುಗಳಲ್ಲಿ, ಅಂಥ ಷರತ್ತುಗಳಿಗೆ ಒಳಪಟ್ಟು, ಅಂಥ ಬಡ್ಡಿಯ ಸಂದಾಯದ ಮೇಲೆ ಮತ್ತು ಅಂಥ ಕಾಲದೊಳಗೆ ಸಂದಾಯ ಮಾಡತಕ್ಕದ್ದು.

ಪರಂತು, ಸಂದಾಯ ಮಾಡಿರುವ ಮೊಬಲಗು ತೆರಿಗೆಯ ಅಥವಾ ಬಾಕಿಯಿರುವ ಯಾವುದೇ ಇತರ ಮೊಬಲಗಿನ ಅಥವಾ ಸಂದಾಯ ಮಾಡಬೇಕಾಗಿರುವ ಬಡ್ಡಿಯ ಒಟ್ಟು ಮೊತ್ತಕ್ಕಿಂತ ಕಡಿಮೆ ಇರುವಲ್ಲಿ, ಹಾಗೆ ಸಂದಾಯ ಮಾಡಿರುವ ಮೊಬಲಗನ್ನು ಮೊದಲು, ಸಂದಾಯ ಮಾಡಬೇಕಾದ ಬಡ್ಡಿಯ ಸಂಬಂಧದಲ್ಲಿ ಸರಿಹೊಂದಿಸತಕ್ಕದ್ದು ಮತ್ತು ಹಣ ಇನ್ನೂ ಉಳಿದಿರುವಲ್ಲಿ ಅದನ್ನು ತೆರಿಗೆ ಅಥವಾ ಬಾಕಿ ಇರುವ ಯಾವುದೇ ಇತರ ಮೊಬಲಗಿಗೆ ಹೊಂದಿಸತಕ್ಕದ್ದು.

**xx xx xx**

**25ಬಿ. ಕಬ್ಬಿನ ಮೇಲೆ ತೆರಿಗೆ ವಿಧಿಸುವುದು.–** (1) 5ನೇ ಪ್ರಕರಣದಲ್ಲಿ ಏನೇ ಒಳಗೊಂಡಿದ್ದರೂ, ರಾಜ್ಯದಲ್ಲಿ ಕಬ್ಬಿನ ಕೊನೆಯ ಖರೀದಿಯ ಮೇಲೆ,–

(i) ಖಂಡಸಾರಿ ಸಕ್ಕರೆಯು ಒಳಗೊಂಡಂತೆ ಸಕ್ಕರೆಯ ವಸೂಲಿ ಪ್ರಮಾಣವು ಶೇಕಡಾ 10.5ನ್ನು ಮೀರಿರುವ ಸಕ್ಕರೆ ಉತ್ಪಾದಕನು ಖರೀದಿಸಿದಾಗ ಒಂದು ಟನ್‌ಗೆ 65 ರೂಪಾಯಿಗಳು.

(ii) ಖಂಡಸಾರಿ ಸಕ್ಕರೆಯು ಒಳಗೊಂಡಂತೆ ಸಕ್ಕರೆಯ ವಸೂಲಿ ಪ್ರಮಾಣವು ಶೇಕಡಾ 10.5ನ್ನು ಮೀರದಿರುವ ಸಕ್ಕರೆಯ ಉತ್ಪಾದಕನು ಖರೀದಿಸಿದಾಗ, ಒಂದು ಟನ್‌ಗೆ 50 ರೂಪಾಯಿಗಳು.

- ದರದಲ್ಲಿ ತೆರಿಗೆಯನ್ನು ವಿಧಿಸತಕ್ಕದ್ದು ಮತ್ತು ವಸೂಲಿ ಮಾಡತಕ್ಕದ್ದು.

(3) (1)ನೇ ಉಪಪ್ರಕರಣದ ಮೇರೆಗೆ ತೆರಿಗೆಯನ್ನು ಮತ್ತು (2)ನೇ ಉಪಪ್ರಕರಣದ ಮೇರೆಗೆ ಉಪಕರವನ್ನು ಸಂದಾಯ ಮಾಡಲು ಹೊಣೆಗಾರನಾಗಿರುವ ಪ್ರತಿಯೊಬ್ಬ ವ್ಯಕ್ತಿಯು ನಿಯಮಿಸಬಹುದಾದಂಥ ರೀತಿಯಲ್ಲಿ ಮತ್ತು ಅಂಥ ಅವಧಿಯೊಳಗೆ ವಿವರ ಪಟ್ಟಿಯನ್ನು ಅಥವಾ ವಿವರ ಪಟ್ಟಿಕೆಗಳನ್ನು ಸಲ್ಲಿಸತಕ್ಕದ್ದು.

(4) ಪ್ರತಿಯೊಬ್ಬ ಖರೀದಿದಾರನು, ಹಿಂದಿನ ತಿಂಗಳ ಅವಧಿಯಲ್ಲಿ ಖರೀದಿಸಿದ ಸಕ್ಕರೆಯ ಪ್ರಮಾಣದ ಮೇಲೆ (1)ನೇ ಉಪಪ್ರಕರಣದ ಮೇರೆಗೆ ಸಂದಾಯ ಮಾಡಬೇಕಾದ ತೆರಿಗೆಯನ್ನು ಮತ್ತು (2)ನೇ ಉಪಪ್ರಕರಣದ ಮೇರೆಗೆ ಸಂದಾಯ ಮಾಡಬೇಕಾದ ಉಪಕರವನ್ನು ಪ್ರತಿ ತಿಂಗಳು ಮುಂಗಡವಾಗಿ ಸಂದಾಯ ಮಾಡತಕ್ಕದ್ದು.

**xx xx xx**

**ಕರ್ನಾಟಕ ಮನೋರಂಜನಾ ತೆರಿಗೆ ಅಧಿನಿಯಮ, 1958 (1958ರ ಕರ್ನಾಟಕ ಅಧಿನಿಯಮ ಸಂಖ್ಯೆ: 30) ಉದ್ಧೃತ ಭಾಗ**

**xx xx xx**

**6ಎ. ವಿವರ ಪಟ್ಟಿಕೆಗಳು.–** (1) ಮನೋರಂಜನೆಯ ಪ್ರತಿಯೊಬ್ಬ ಮಾಲೀಕನು ಗೌರವಾರ್ಥ ಟಿಕೆಟ್‌ಗಳಿಗೆ ಮತ್ತು ಪ್ರವೇಶಕ್ಕಾಗಿನ ಸಂದಾಯಗಳಿಗೆ ಸಂಬಂಧಪಟ್ಟಂಥ ಅಂಥ ವಿವರ ಪಟ್ಟಿಕೆಗಳನ್ನು ನಿಯಮಿಸಬಹುದಾದಂಥ ರೀತಿಯಲ್ಲಿ ಮತ್ತು ಅಂಥ ಕಾಲದೊಳಗೆ ಅಂಥ ಪ್ರಾಧಿಕಾರಕ್ಕೆ ಒಪ್ಪಿಸತಕ್ಕದ್ದು;

ಪರಂತು, ಒಂದು ಪ್ರದರ್ಶನ ಅಥವಾ ಒಂದು ವಾರಕ್ಕಿಂತ ಕಡಿಮೆ ಅವಧಿಗೆ ನಡೆಸುವ ಮನೋರಂಜನೆಯ ಸಂಬಂಧದಲ್ಲಿ ಮಾಲೀಕನು, ಅಂಥ ಮನೋರಂಜನೆಯ ಮುಕ್ತಾಯವಾದ ಕೂಡಲೇ ನಿಯಮಿಸಬಹುದಾದಂಥ ವಿವರಪಟ್ಟಿಕೆಯನ್ನು ಸಲ್ಲಿಸತಕ್ಕದ್ದು.

(1ಎ) ಯಾವನೇ ಮಾಲೀಕನು, (1)ನೇ ಉಪ ಪ್ರಕರಣದಿಂದ ಅಗತ್ಯಪಡಿಸಿದ ವಿವರಪಟ್ಟಿಕೆಗಳನ್ನು ಒಪ್ಪಿಸುವುದಕ್ಕೆ ಮುಂಚೆ, ಅವನು ಅಂಥ ವಿವರಪಟ್ಟಿಕೆಗಳ ಆಧಾರದ ಮೇಲೆ ತಾನು ಸಂದಾಯ ಮಾಡಬೇಕಾದ ತೆರಿಗೆಯ ಪೂರ್ಣ ಮೊಬಲಗು ಮತ್ತು ಹೆಚ್ಚಿನ ತೆರಿಗೆ ಅಥವಾ ಇತರ ತೆರಿಗೆಗಳು ಯಾವುದಾದರೂ ಇದ್ದರೆ ಅವುಗಳನ್ನು ನಿಯಮಿಸಿದ ರೀತಿಯಲ್ಲಿ ಸರ್ಕಾರೀ ಖಜಾನೆಗೆ ಸಂದಾಯ ಮಾಡತಕ್ಕದ್ದು ಮತ್ತು ವಿವರಪಟ್ಟಿಕೆಯ ಜೊತೆಗೆ ಅಂಥ ಸಂದಾಯವನ್ನು ಸಾಕ್ಷೀಕರಿಸುವ ಖಜಾನೆಯಿಂದ ಪಡೆದ ರಸೀದಿಯನ್ನು ಒದಗಿಸತಕ್ಕದ್ದು.

XX XX XX

**9. ತೆರಿಗೆಯ ಸಂದಾಯ ಮತ್ತು ವಸೂಲಿ.–** (1) ಈ ಅಧಿನಿಯಮದ ಮೇರೆಗೆ ಸಂದಾಯ ಮಾಡಬೇಕಾದ ತೆರಿಗೆಯನ್ನು ನಿಯಮಿಸಬಹುದಾದಂಥ ರೀತಿಯಲ್ಲಿ ಮತ್ತು ಅಂಥ ಕಂತುಗಳಲ್ಲಿ, ಯಾವುದಾದರೂ ಇದ್ದರೆ, ಮತ್ತು ಅಂಥ ಕಾಲದೊಳಗೆ ಸಂದಾಯ ಮಾಡತಕ್ಕದ್ದು.

**xx xx xx**

**ಕರ್ನಾಟಕ ವ್ಯಾಪಾರಗಳು, ಆಜೀವಿಕೆಗಳು ಮತ್ತು ಉದ್ಯೋಗಳ ಮೇಲೆ ತೆರಿಗೆ ಅಧಿನಿಯಮ, 1976ರ (1976ರ ಕರ್ನಾಟಕ ಅಧಿನಿಯಮ ಸಂಖ್ಯೆ 35) ಉದ್ಧೃತ ಭಾಗಗಳು**

**6. ವಿವರ ಪಟ್ಟಿಕೆ.–** (1) 6ಎ ಪ್ರಕರಣದಲ್ಲಿ ಏನೇ ಒಳಗೊಂಡಿದ್ದರೂ, ಈ ಅಧಿನಿಯಮದ ಅಡಿಯಲ್ಲಿ ನೋಂದಾಯಿತನಾಗಿರುವ ಪ್ರತಿಯೊಬ್ಬ ನಿಯೋಜಕನು, ತಾನು ಸಂದಾಯ ಮಾಡಿರುವ ಸಂಬಳಗಳನ್ನು ಮತ್ತು ಮಜೂರಿಗಳನ್ನು ಮತ್ತು ಹಿಂದಿನ ವರ್ಷದ ಅವಧಿಯಲ್ಲಿ ಅದರ ಸಂಬಂಧದಲ್ಲಿ ತಾನು ಮುರುಗಡೆ ಮಾಡಿರುವ ತೆರಿಗೆಯ ಮೊಬಲಗನ್ನು ತೋರಿಸುವ ವಿವರ ಪಟ್ಟಿಕೆಯನ್ನು ನಿಯಮಿಸಲಾದ ನಮೂನೆಯಲ್ಲಿ ತೆರಿಗೆ ನಿರ್ಧರಣಾ ಪ್ರಾಧಿಕಾರಿಗೆ ವರ್ಷದ ಮುಕ್ತಾಯದ ಅರವತ್ತು ದಿನಗಳೊಳಗಾಗಿ ಒದಗಿಸತಕ್ಕದ್ದು.

(2) ಯಾರೇ ನಿಯೋಜಕನು (1)ನೇ ಉಪಪ್ರಕರಣದ ಮೇರೆಗೆ ಯಾವುದೇ ವಿವರ ಪಟ್ಟಿಕೆಯನ್ನು ಸಲ್ಲಿಸುವುದಕ್ಕೆ ಮುಂಚೆ, ಅಂಥ ವಿವರ ಪಟ್ಟಿಕೆಯ ಆಧಾರದ ಮೇಲೆ ಅವನು ಸಂದಾಯ ಮಾಡಬೇಕಾದ ಪೂರ್ಣ ಮೊಬಲಗಿನಿಂದ 6ಎ ಪ್ರಕರಣದ ಮೇರೆಗೆ ಈಗಾಗಲೇ ಸಂದಾಯ ಮಾಡಿರುವಷ್ಟು ತೆರಿಗೆಯನ್ನು ಕಡಿಮೆ ಮಾಡಿ, ಮುಂಚಿತವಾಗಿ, ಗೊತ್ತುಪಡಿಸಲಾದ ರೀತಿಯಲ್ಲಿ, ಸಂದಾಯ ಮಾಡತಕ್ಕದ್ದು. ಆ ವಿವರ ಪಟ್ಟಿಕೆಯ ಜೊತೆ ಅಂಥ ತೆರಿಗೆಯನ್ನು ಸಂದಾಯ ಮಾಡಿರುವ ಬಗ್ಗೆ ತೃಪ್ತಿಕರ ರುಜುವಾತನ್ನು ಒದಗಿಸತಕ್ಕದ್ದು. ಸಂದಾಯ ಮಾಡಿರುವ ಬಗ್ಗೆ ಪುರಾವೆ ಇಲ್ಲದ ವಿವರ ಪಟ್ಟಿಕೆಯನ್ನು ದಾಖಲ್ಮಾಡಲಾಗಿದೆಯೆಂದು ಭಾವಿಸತಕ್ಕದ್ದಲ್ಲ. ಅಂತಿಮವಾಗಿ ತೆರಿಗೆ ನಿರ್ಧರಣೆಯನ್ನು ಮಾಡಿದ ತರುವಾಯ ಹಾಗೆ ಸಂದಾಯ ಮಾಡಿದ ತೆರಿಗೆಯ ಮೊಬಲಗನ್ನು ಅಂತಿಮವಾಗಿ ನಿರ್ಧರಣೆ ಮಾಡಿದ ತೆರಿಗೆಯ ಸಂಬಂಧದಲ್ಲಿ ಸಂದಾಯ ಮಾಡಲಾಗಿದೆ ಎಂದು ಭಾವಿಸತಕ್ಕದ್ದು.

xx xx xx

**6ಎ. ಮುಂಗಡವಾಗಿ ತೆರಿಗೆಯ ಸಂದಾಯ.–** (1) ಈ ಅಧಿನಿಯಮದ ಅಡಿಯಲ್ಲಿ ನೋಂದಾಯಿತನಾದ ಪ್ರತಿಯೊಬ್ಬ ನಿಯೋಜಕನು, ಗೊತ್ತುಪಡಿಸಲಾದ ನಮೂನೆಯಲ್ಲಿ ಆ ತಿಂಗಳ ನಿಕಟ ಹಿಂದಿನ ತಿಂಗಳ ಅವಧಿಯಲ್ಲಿ ತಾನು ಸಂದಾಯ ಮಾಡಿದ ಸಂಬಳ ಮತ್ತು ಮಜೂರಿಗಳನ್ನು ಮತ್ತು ಆ ಸಂಬಂಧದಲ್ಲಿ ತಾನು ಕಡಿತಮಾಡಿದ ತೆರಿಗೆಯ ಮೊಬಲಗನ್ನು ತೋರಿಸುವ ಒಂದು ವಿವರ ಪತ್ರವನ್ನು ತಿಂಗಳ ಮುಕ್ತಾಯದ ಇಪ್ಪತ್ತು ದಿನಗಳೊಳಗೆ ತೆರಿಗೆ ನಿರ್ಧರಣಾ ಪ್ರಾಧಿಕಾರಿಗೆ ಒದಗಿಸತಕ್ಕದ್ದು.

ಪರಂತು, ಒಂದು ತಿಂಗಳಲ್ಲಿ ಮುರುಗಡೆ ಮಾಡಿರುವ ತೆರಿಗೆಯ ಮೊಬಲಗು ಐದು ಸಾವಿರ ರೂಪಾಯಿ ಗಳಿಗಿಂತ ಹೆಚ್ಚಾಗಿಲ್ಲದಿರುವಲ್ಲಿ, ನೋಂದಾಯಿತ ನಿಯೋಜಕನು, ತಾನು ಸಂದಾಯ ಮಾಡಿರುವ ಸಂಬಳ ಮತ್ತು ಮಜೂರಿಗಳನ್ನು ಮತ್ತು ನಿಕಟ ಹಿಂದಿನ ತ್ರೈಮಾಸಿಕದ ಅವಧಿಯಲ್ಲಿ ಆ ಸಂಬಂಧದಲ್ಲಿ ತಾನು ಮುರುಗಡೆ ಮಾಡಿರುವ ಮೊಬಲಗನ್ನು ತೋರಿಸುವ ವಿವರ ಪತ್ರವನ್ನು ತ್ರೈಮಾಸಿಕವು ಮುಕ್ತಾಯವಾಗುವ ಇಪ್ಪತ್ತು ದಿನಗಳೊಳಗಾಗಿ ಒದಗಿಸತಕ್ಕದ್ದು.

**ವಿವರಣೆ.–** ಈ ಪರಂತುಕದ ಉದ್ದೇಶಕ್ಕಾಗಿ "ತ್ರೈಮಾಸಿಕ" ಎಂದರೆ ಮೇ ತಿಂಗಳ 31ನೇ ದಿನದಂದು, ಆಗಸ್ಟ್ ತಿಂಗಳ 31ನೇ ದಿನದಂದು, ನವೆಂಬರ್ ತಿಂಗಳ 30ನೇ ದಿನದಂದು, ಫೆಬ್ರವರಿ ತಿಂಗಳ 28ನೇ ದಿನದಂದು ಅಥವಾ 29ನೇ ದಿನದಂದು ಕೊನೆಗೊಳ್ಳುವ ಮೂರು ತಿಂಗಳುಗಳ ಅವಧಿ

(2) ಅಂಥ ಪ್ರತಿಯೊಂದು ವಿವರ ಪತ್ರದ ಜೊತೆಗೆ ಆ ವಿವರ ಪತ್ರಕ್ಕೆ ಅನುಸಾರವಾಗಿ ಬಾಕಿ ಇರುವ ತೆರಿಗೆಯ ಪೂರ್ಣ ಮೊಬಲಗನ್ನು ಸಂದಾಯ ಮಾಡಿದ ಬಗ್ಗೆ ರುಜುವಾತಿಗಾಗಿ ಖಜಾನೆಯ ಚಲನ್ ಇರತಕ್ಕದ್ದು ಮತ್ತು ಹಾಗೆ ಸಂದಾಯ ಮಾಡಿದುದಕ್ಕೆ ರುಜುವಾತು ಇಲ್ಲದ ವಿವರ ಪತ್ರವನ್ನು ಕ್ರಮಬದ್ಧವಾಗಿ ದಾಖಲು ಮಾಡಲಾದ ವಿವರ ಪತ್ರವೆಂದು ಭಾವಿಸತಕ್ಕದ್ದಲ್ಲ ಮತ್ತು ಹಾಗೆ ಸಂದಾಯ ಮಾಡಬೇಕಾದ ಮೊಬಲಗನ್ನು 11ನೇ ಪ್ರಕರಣದ ಮತ್ತು 13ನೇ ಪ್ರಕರಣದ ಉದ್ದೇಶಕ್ಕಾಗಿ, ಅಂಥ ನಿಯೋಜನಕನಿಂದ ಈ ಅಧಿನಿಯಮದ ಮೇರೆಗೆ ಬಾಕಿ ಇರುವ ತೆರಿಗೆ ಎಂದು ಭಾವಿಸತಕ್ಕದ್ದು.

xx xx xx

**10. ಹೆಸರು ದಾಖಲಿಸಿದ ವ್ಯಕ್ತಿಗಳ ತೆರಿಗೆಯನ್ನು ಸಂದಾಯ ಮಾಡುವುದು ಮತ್ತು ವಿವರ ಪತ್ರವನ್ನು ದಾಖಲ್ಮಾಡುವುದು ಮತ್ತು ಹೆಸರು ದಾಖಲಿಸಿದ ಕೆಲವು ವ್ಯಕ್ತಿಗಳ ಸಂದರ್ಭದಲ್ಲಿ ತೆರಿಗೆಯ ಮುರುಗಡೆ.–** (1) ಹೆಸರು ದಾಖಲಿಸಿದ ಪ್ರತಿಯೊಬ್ಬ ವ್ಯಕ್ತಿಯು, ಈ ಅಧಿನಿಯಮದ ಮೇರೆಗೆ ಅವನು ಸಂದಾಯ ಮಾಡಬೇಕಾದ ತೆರಿಗೆಯನ್ನು ಸಂದಾಯ ಮಾಡತಕ್ಕದ್ದು ಮತ್ತು ನಿಯಮಿಸಬಹುದಾದಂಥ ರೀತಿಯಲ್ಲಿ ಮತ್ತು ಅಂಥ ನಮೂನೆಯಲ್ಲಿ, ತೆರಿಗೆ ನಿರ್ಧರಣಾ ಪ್ರಾಧಿಕಾರಿಯು ಮುಂದೆ, ತನ್ನ ವಿವರ ಪಟ್ಟಿಕೆಯನ್ನು ದಾಖಲ್ಮಾಡತಕ್ಕದ್ದು.

ಪರಂತು, ಪಟ್ಟಿಗೆ ಹೆಸರು ದಾಖಲು ಮಾಡಿಕೊಳ್ಳಲು ಹೊಣೆಗಾರನಾದ ವ್ಯಕ್ತಿಯು ಹಾಗೆ ಹೆಸರು ದಾಖಲಿಸಿಕೊಳ್ಳದೇ ಇದ್ದರೂ, ಈ ಅಧಿನಿಯಮದ ಅಡಿಯಲ್ಲಿ ತೆರಿಗೆ ಸಂದಾಯದ ಉದ್ದೇಶಕ್ಕಾಗಿ ಹೆಸರು ದಾಖಲು ಮಾಡಿಸಿಕೊಂಡವನು ಎಂದು ಭಾವಿಸತಕ್ಕದ್ದು.

xx xx xx

**ವಿಶೇಷ ಪತ್ರಿಕೆ**

| ಭಾಗ – **IV-A** | ಬೆಂಗಳೂರು, ಗುರುವಾರ, ಮಾರ್ಚ್ ೧೮, ೨೦೧೦ (ಫಾಲ್ಗುಣ ೨೭, ಶಕ ವರ್ಷ ೧೯೩೨) | ನಂ. ೨೬೯ |
|---|---|---|

**KARNATAKA LEGISLATIVE ASSEMBLY SECRETARIAT**

**NOTIFICATION**

**No. KLA/LGA/53/Bill/2010, Bangalore, Dated : 18th March, 2010**

The following Bill was introduced in Legislative Assembly on 18th March, 2010.

**THE KARNATAKA VALUE ADDED TAX (AMENDMENT) BILL, 2010**

**(L.A. Bill No. 10 of 2010)**

**ಕರ್ನಾಟಕ ವಿಧಾನ ಸಭೆ**

**ಹದಿಮೂರನೇ ವಿಧಾನಸಭೆ**

**ಐದನೇ ಅಧಿವೇಶನ**

**ಕರ್ನಾಟಕ ಮೌಲ್ಯವರ್ಧಿತ ತೆರಿಗೆ (ತಿದ್ದುಪಡಿ) ವಿಧೇಯಕ, 2010**
**(2010ರ ವಿಧಾನಸಭೆಯ ವಿಧೇಯಕ ಸಂಖ್ಯೆ 10)**

ಕರ್ನಾಟಕ ಮೌಲ್ಯವರ್ಧಿತ ತೆರಿಗೆ ಅಧಿನಿಯಮ, 2003 ನ್ನು ಮತ್ತಷ್ಟು ತಿದ್ದುಪಡಿ ಮಾಡಲು ಒಂದು ವಿಧೇಯಕ.

ಇಲ್ಲಿ ಇನ್ನು ಮುಂದೆ ಕಂಡುಬರುವ ಉದ್ದೇಶಗಳಿಗಾಗಿ ಕರ್ನಾಟಕ ಮೌಲ್ಯವರ್ಧಿತ ತೆರಿಗೆ ಅಧಿನಿಯಮ, 2003ನ್ನು (2004ರ ಕರ್ನಾಟಕ ಅಧಿನಿಯಮ 32) ಮತ್ತಷ್ಟು ತಿದ್ದುಪಡಿ ಮಾಡುವುದು ಯುಕ್ತವಾಗಿರುವುದರಿಂದ;

ಇದು ಭಾರತ ಗಣರಾಜ್ಯದ ಅರವತ್ತೊಂದನೇ ವರ್ಷದಲ್ಲಿ ಕರ್ನಾಟಕ ರಾಜ್ಯ ವಿಧಾನ ಮಂಡಲದಿಂದ ಈ ಮುಂದಿನಂತೆ ಅಧಿನಿಯಮಿತವಾಗತಕ್ಕದ್ದು:-

**1. ಸಂಕ್ಷಿಪ್ತ ಹೆಸರು ಮತ್ತು ಪ್ರಾರಂಭ.–** (1) ಈ ಅಧಿನಿಯಮವನ್ನು ಕರ್ನಾಟಕ ಮೌಲ್ಯವರ್ಧಿತ ತೆರಿಗೆ (ತಿದ್ದುಪಡಿ) ಅಧಿನಿಯಮ, 2010 ಎಂದು ಕರೆಯತಕ್ಕದ್ದು.

**(2)** ಇದು 2010ರ ಏಪ್ರಿಲ್ ಒಂದನೇ ದಿನಾಂಕದಿಂದ ಜಾರಿಗೆ ಬರತಕ್ಕದ್ದು.

**2. 4ನೇ ಪಕರಣದ ತಿದ್ದುಪಡಿ.–** ಕರ್ನಾಟಕ ಮೌಲ್ಯವರ್ಧಿತ ತೆರಿಗೆ ಅಧಿನಿಯಮ, 2003ರಲ್ಲಿ (2004 ರ ಕರ್ನಾಟಕ ಅಧಿನಿಯಮ 32) (ಇಲ್ಲಿ ಇನ್ನು ಮುಂದೆ ಮೂಲ ಅಧಿನಿಯಮವೆಂದು ಉಲ್ಲೇಖಿಸಲಾಗಿದೆ), 4ನೇ ಪ್ರಕರಣದಲ್ಲಿ,–

(i) (1)ನೇ ಉಪ–ಪ್ರಕರಣದಲ್ಲಿ,–

(ಎ) (ಎ) ಖಂಡದ (ii)ನೇ ಉಪ–ಖಂಡದಲ್ಲಿ " ಶೇಕಡ ನಾಲ್ಕರ" ಎಂಬ ಪದಗಳಿಗೆ "30ನೇ ಕ್ರಮಸಂಖ್ಯೆಯಲ್ಲಿ ನಿರ್ದಿಷ್ಟಪಡಿಸಿದ ಸರಕುಗಳ ಸಂಬಂಧದಲ್ಲಿ ಶೇಕಡ ನಾಲ್ಕರ ಮತ್ತು ಇತರ ಸರಕುಗಳ ಸಂಬಂಧಲ್ಲಿ ಶೇಕಡ ಐದರ ದರದಲ್ಲಿ" ಎಂಬ ಪದಗಳು ಮತ್ತು ಅಂಕಿಗಳನ್ನು ಪ್ರತಿಯೋಜಿಸತಕ್ಕದ್ದು.

(ಬಿ) (ಬಿ) ಖಂಡಕ್ಕೆ ಈ ಮುಂದಿನದನ್ನು ಪ್ರತಿಯೋಜಿಸತಕ್ಕದ್ದು, ಎಂದರೆ:–

"(ಬಿ) (i) ಸಿಗರೇಟುಗಳು, ಸಿಗಾರುಗಳು, ಗುಟ್ಕಾ ಮತ್ತು ಇತರ ತಂಬಾಕು ತಯಾರಿಕೆಗಳ ಸಂಬಂಧದಲ್ಲಿ ಶೇಕಡ ಹದಿನೈದರ ದರದಲ್ಲಿ;

(ii) ಇತರ ಸರಕುಗಳ ಸಂಬಂಧದಲ್ಲಿ ಶೇಕಡ ಹದಿಮೂರುವರೆ ದರದಲ್ಲಿ,"

(ii) (3)ನೇ ಉಪ–ಪ್ರಕರಣದ ತರುವಾಯ ಈ ಮುಂದಿನದನ್ನು ಸೇರಿಸತಕ್ಕದ್ದು, ಎಂದರೆ:–

"(3–ಎ) (3)ನೇ ಉಪ–ಪ್ರಕರಣದ ಅಡಿಯಲ್ಲಿ ಹೊರಡಿಸಿದ ಯಾವುದೇ ಅಧಿಸೂಚನೆಯು, ಈ ಅಧಿನಿಯಮಕ್ಕೆ ತಿದ್ದುಪಡಿಯನ್ನು ಮಾಡುವ ಮೂಲಕ ನಿರ್ದಿಷ್ಟಪಡಿಸಿದ ಯಾವುವೇ ಸರಕುಗಳ ಸಂಬಂಧದಲ್ಲಿ ಸಂದಾಯ ಮಾಡತಕ್ಕ ತೆರಿಗೆಯನ್ನು ಮಾರ್ಪಾಡು ಮಾಡಿದಾಗ್ಯೂ, ಅದನ್ನು ರದ್ದುಗೊಳಿಸುವವರೆಗೆ ಅಥವಾ ಮಾರ್ಪಾಡುಗೊಳಿಸುವವರೆಗೆ ಸಿಂಧುವಾಗಿರತಕ್ಕದ್ದು,"

(iii) (4)ನೇ ಉಪ–ಪ್ರಕರಣದಲ್ಲಿ "ಮೂರನೇ ಅನುಸೂಚಿಯ" ಎಂಬ ಪದಗಳಿಗೆ ಮೊದಲು "ಯಾವುದೇ ಸರಕುಗಳ ಅಥವಾ" ಎಂಬ ಪದಗಳನ್ನು ಸೇರಿಸತಕ್ಕದ್ದು.

(iv) (4)ನೇ ಉಪ–ಪ್ರಕರಣದ ತರುವಾಯ ಈ ಮುಂದಿನದನ್ನು ಸೇರಿಸತಕ್ಕದ್ದು, ಎಂದರೆ:–

"(5) (1)ನೇ ಉಪ–ಪ್ರಕರಣದಲ್ಲಿ ಏನೇ ಒಳಗೊಂಡಿದ್ದರೂ, ಒಬ್ಬ ನೋಂದಾಯಿತ ವ್ಯಾಪಾರಿಯು ಸಿಗರೇಟುಗಳು, ಸಿಗಾರಗಳು, ಗುಟ್ಕಾ ಮತ್ತು ಇತರ ತಂಬಾಕು ತಯಾರಿಕೆಗಳ ಮಾರಾಟದ ಮೇಲೆ, ಅವುಗಳ ಧಾರಕ ಅಥವಾ ಅವುಗಳ ಪ್ಯಾಕ್‌ಗಳ ಮೇಲಿರುವ ಲೇಬಲಿನಲ್ಲಿ ನಮೂದಿಸಿದ ಗರಿಷ್ಠ ಚಿಲ್ಲರೆ ಬೆಲೆಯ ಮೇಲೆ, ಅಂಥ ಗರಿಷ್ಠ ಚಿಲ್ಲರೆ ಬೆಲೆಯಲ್ಲಿ ಸಂದಾಯ ಮಾಡತಕ್ಕ ತೆರಿಗೆಗೆ ಸಮನಾದ ಮೊತ್ತವನ್ನು ಕಡಿತಗೊಳಿಸಿದ ತರುವಾಯ, ಅಂಥ ಸರಕುಗಳ ಮಾರಾಟಕ್ಕಾಗಿನ ಪ್ರತಿಫಲವಾಗಿ ವ್ಯಾಪಾರಿಗೆ ಸಂದಾಯ ಮಾಡತಕ್ಕ ಒಟ್ಟು ಮೊಬಲಗು ಐದು ನೂರು ರೂಪಾಯಿಗಳು ಅಥವಾ ಆಯುಕ್ತರು ಅಧಿಸೂಚಿಸಬಹುದಾದಂತೆ ಯಾವುದೇ ಹೆಚ್ಚಿನ ಮೊಬಲಗನ್ನು ಮೀರಿದ್ದಲ್ಲಿ, ತೆರಿಗೆಯನ್ನು ಸಂದಾಯ ಮಾಡಲು ಬದ್ಧನಾಗಿರತಕ್ಕದ್ದು.

(6) ಆತನು ಖರೀದಿಸಿದ ಸರಕುಗಳ ಸಂಬಂಧದಲ್ಲಿ (5)ನೇ ಉಪ–ಪ್ರಕರಣದ ಅನುಸಾರವಾಗಿ ತೆರಿಗೆಯನ್ನು ಸಂಗ್ರಹಿಸಿದ್ದಲ್ಲಿ,–

(ಎ) ಯಾವ ನೋಂದಾಯಿತ ವ್ಯಾಪಾರಿಯ ಅಂಥ ಸರಕುಗಳ ಮಾರಾಟವು (5)ನೇ ಉಪ–ಪ್ರಕರಣದ ಅಡಿಯಲ್ಲಿ ತೆರಿಗೆಗೆ ಬದ್ಧವಾಗಿಲ್ಲವೋ ಆ ವ್ಯಾಪಾರಿಯು, ಅಂಥ ಸರಕುಗಳ ಮಾರಾಟಕ್ಕೆ ಸಂಬಂಧಿಸಿದಂತೆ, ಆತನ ವಹಿವಾಟಿನ ಮೇಲೆ ಸಂದಾಯ ಮಾಡಬೇಕಾದ ತೆರಿಗೆಗಿಂತ ಹೆಚ್ಚಾಗಿ, ಆತನ ಖರೀದಿಯ ಮೇಲೆ ಸಂಗ್ರಹಿಸಿದ ತೆರಿಗೆಯ ಯಾವುದೇ ಮೊಬಲಗಿನ ಮರುಪಾವತಿಗಾಗಿ ಅಥವಾ ಹೊಂದಾಣಿಕೆಗಾಗಿ ಅರ್ಹನಾಗಿರತಕ್ಕದ್ದು ಮತ್ತು ಸದರಿ ಉಪ–ಪ್ರಕರಣದ ಅನುಸಾರವಾಗಿ ತೆರಿಗೆಯನ್ನು ಸಂಗ್ರಹಿಸಲಾಗಿಎಂದು ಮತ್ತು ಸಂದಾಯ ಮಾಡಲಾಗಿಎಂದು ರುಜುವಾತು ಪಡಿಸುವ ಭಾರವು ಅಂಥ ವ್ಯಾಪಾರಿಯ ಮೇಲೆ ಇರತಕ್ಕದ್ದು;

(ಬಿ) ಅಧಿನಿಯಮದಡಿಯಲ್ಲಿ ನೋಂದಾಯಿತನಾಗಲು ಬದ್ಧನಾದ ವ್ಯಾಪಾರಿಯಲ್ಲದ ಒಬ್ಬ ವ್ಯಕ್ತಿಯು, ನಿಯಮಿಸಬಹುದಾದಂಥ ವಿಧಾನದಲ್ಲಿ ಮತ್ತು ಅಂಥ ಷರತ್ತುಗಳಿಗೊಳಪಟ್ಟು, ಅಂಥ ಮಾರಾಟ ಮಾಡುವ ವ್ಯಾಪಾರಿಗೆ ತಾನು ಸಂದಾಯ ಮಾಡಿದ ಪ್ರತಿಫಲದ ಮೇಲೆ ಸಂದಾಯ ಮಾಡಬೇಕಾದ ತೆರಿಗೆಗಿಂತ ಹೆಚ್ಚಿಗೆಯಾಗಿ ಅಂಥ ವ್ಯಾಪಾರಿಯು ಸಂದಾಯ ಮಾಡಿದ ಯಾವುದೇ ಮೊಬಲಗಿನ ಮರುಪಾವತಿಗಾಗಿ ಕ್ಲೇಮು ಮಾಡಬಹುದು."

**3. 5ನೇ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 5ನೇ ಪ್ರಕರಣದಲ್ಲಿ (1)ನೇ ಉಪ–ಪ್ರಕರಣದ ತರುವಾಯ ಈ ಮುಂದಿನದನ್ನು ಸೇರಿಸತಕ್ಕದ್ದು, ಎಂದರೆ:–

"(1–ಎ) (1)ನೇ ಉಪ–ಪ್ರಕರಣದ ಅಡಿಯಲ್ಲಿ ಹೊರಡಿಸಿದ ಯಾವುದೇ ಅಧಿಸೂಚನೆಯು, ಈ ಅಧಿನಿಯಮಕ್ಕೆ ತಿದ್ದುಪಡಿಯನ್ನು ಮಾಡುವ ಮೂಲಕ ನಿರ್ದಿಷ್ಟಪಡಿಸಿದ ಯಾವುವೇ ಸರಕುಗಳ ಸಂಬಂಧದಲ್ಲಿ ಸಂದಾಯ ಮಾಡತಕ್ಕ ತೆರಿಗೆಯನ್ನು ಮಾರ್ಪಾಡು ಮಾಡಿದಾಗ್ಯೂ, ಅದನ್ನು ರದ್ದುಗೊಳಿಸುವವರೆಗೆ ಅಥವಾ ಮಾರ್ಪಾಡುಗೊಳಿಸುವವರೆಗೆ ಸಿಂಧುವಾಗಿರತಕ್ಕದ್ದು,"

**4. 18ನೇ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 18ನೇ ಪ್ರಕರಣದ (2)ನೇ ಉಪ–ಪ್ರಕರಣದಲ್ಲಿ "ಎರಡು ಲಕ್ಷ ರೂಪಾಯಿಗಳಿಗಿಂತ" ಎಂಬ ಪದಗಳಿಗೆ "ಐದು ಲಕ್ಷ ರೂಪಾಯಿಗಳಿಗಿಂತ " ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು.

**5. 18ಎ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 18ಎ ಪ್ರಕರಣದ (5)ನೇ ಉಪ–ಪ್ರಕರಣದಲ್ಲಿ "ಈ ಉಪಪ್ರಕರಣದ ಉಪಬಂಧಗಳನ್ನು" ಎಂಬ ಪದಗಳಿಗೆ "(4)ನೇ ಉಪ–ಪ್ರಕರಣದ ಉಪಬಂಧಗಳನ್ನು" ಎಂಬ ಪದಗಳು, ಆವರಣ ಚಿಹ್ನೆಗಳು ಮತ್ತು ಅಂಕಿಯನ್ನು ಪ್ರತಿಯೋಜಿಸತಕ್ಕದ್ದು.

**6. 22ನೇ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 22ನೇ ಪ್ರಕರಣದಲ್ಲಿ,–

(i) (1)ನೇ ಉಪ–ಪ್ರಕರಣವನ್ನು ಬಿಟ್ಟುಬಿಡತಕ್ಕದ್ದು.

(ii) (2)ನೇ ಉಪ–ಪ್ರಕರಣದಲ್ಲಿ "ಎರಡು ಲಕ್ಷ ರೂಪಾಯಿಗಳನ್ನು" ಎಂಬ ಪದಗಳಿಗೆ "ಐದು ಲಕ್ಷ ರೂಪಾಯಿಗಳನ್ನು" ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು.

(iii) (3)ನೇ ಉಪ–ಪ್ರಕರಣದಲ್ಲಿ "ಹದಿನೈದು ಸಾವಿರ ರೂಪಾಯಿಗಳನ್ನು" ಎಂಬ ಪದಗಳಿಗೆ "ನಲವತ್ತು ಸಾವಿರ ರೂಪಾಯಿಗಳನ್ನು" ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು.

**7. 27ನೇ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 27ನೇ ಪ್ರಕರಣದ (1)ನೇ ಉಪ–ಪ್ರಕರಣದ (ಸಿ) ಖಂಡದಲ್ಲಿ "ಎರಡು ಲಕ್ಷ ರೂಪಾಯಿಗಳನ್ನು" ಎಂಬ ಪದಗಳಿಗೆ "ಐದು ಲಕ್ಷ ರೂಪಾಯಿಗಳನ್ನು" ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು.

**8. 31ನೇ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 31ನೇ ಪ್ರಕರಣದ (4)ನೇ ಉಪ–ಪ್ರಕರಣದಲ್ಲಿ,–

(i) "ನಲವತ್ತು ಲಕ್ಷ ರೂಪಾಯಿಗಳನ್ನು" ಎಂಬ ಪದಗಳಿಗೆ "ಅರವತ್ತು ಲಕ್ಷ ರೂಪಾಯಿಗಳನ್ನು" ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು.

(ii) ಈ ಮುಂದಿನ ಪರಂತುಕವನ್ನು ಸೇರಿಸತಕ್ಕದ್ದು, ಎಂದರೆ:–

"ಪರಂತು, 2010ರ ಮಾರ್ಚ್ 31ನೇ ದಿನಾಂಕದಂದು ಕೊನೆಗೊಳ್ಳುವ ವರ್ಷದಲ್ಲಿ ಒಟ್ಟು ವಹಿವಾಟು ನಲವತ್ತು ಲಕ್ಷ ರೂಪಾಯಿಗಳನ್ನು ಮೀರುವ ಪ್ರತಿಯೊಬ್ಬ ವ್ಯಾಪಾರಿಯು ತನ್ನ ಲೆಕ್ಕಪತ್ರಗಳನ್ನು ಲೆಕ್ಕಪರಿಶೋಧನೆ ಮಾಡಿಸತಕ್ಕದ್ದು."

**9. 35ನೇ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 35ನೇ ಪ್ರಕರಣದ (1)ನೇ ಉಪ–ಪ್ರಕರಣದಲ್ಲಿ ಈ ಮುಂದಿನ ಪರಂತುಕವನ್ನು ಸೇರಿಸತಕ್ಕದ್ದು, ಎಂದರೆ;–

"ಪರಂತು, ನಿರ್ದಿಷ್ಟಪಡಿಸಲಾದ ವರ್ಗದ ವ್ಯಾಪಾರಿಗಳು, ಆಯುಕ್ತರು ಅಧಿಸೂಚಿಸಬಹುದಾದಂತೆ ಅಂಥ ಅಧಿಸೂಚನೆಯಲ್ಲಿ ನಿರ್ದಿಷ್ಟಪಡಿಸಿದ ವಿದ್ಯುನ್ಮಾನ ವಿಧಾನದಲ್ಲಿ, ಅಂತರ್ಜಾಲ ಮೂಲಕ ನಿಯಮಿಸಲಾದ ನಮೂನೆಯಲ್ಲಿ ವಿವರ ಪಟ್ಟಿಗಳನ್ನು ತಯಾರಿಸಲು ವಿವರಗಳನ್ನು ಒದಗಿಸತಕ್ಕದ್ದು ಅಥವಾ ನಿಯಮಿಸಲಾದ ನಮೂನೆಯಲ್ಲಿ ವಿವರ ಪಟ್ಟಿಗಳನ್ನು ಸಲ್ಲಿಸತಕ್ಕದ್ದು;

ಮತ್ತು ಪರಂತು, ನಿರ್ದಿಷ್ಟಪಡಿಸಿದ ವರ್ಗದ ವ್ಯಾಪಾರಿಗಳು, ಆಯುಕ್ತರು ಅಧಿಸೂಚಿಸಬಹುದಾದಂತೆ ವಿವರ ಪಟ್ಟಿಗಳ ಆಧಾರದ ಮೇಲೆ ತೆರಿಗೆಯನ್ನು, ಅಂಥ ಅಧಿಸೂಚನೆಯಲ್ಲಿ ನಿರ್ದಿಷ್ಟಪಡಿಸಿದ ವಿಧಾನದಲ್ಲಿ, ವಿದ್ಯುನ್ಮಾನ ವಿಧಾನದಲ್ಲಿ ಅಂತರ್ಜಾಲ ಮೂಲಕ ಸಂದಾಯ ಮಾಡತಕ್ಕದ್ದು."

**10. 53ನೇ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 53ನೇ ಪ್ರಕರಣದಲ್ಲಿ,–

(i) (2)ನೇ ಉಪ ಪ್ರಕರಣದಲ್ಲಿ,–

(ಎ) (ಸಿ) ಖಂಡದಲ್ಲಿ "ರಾಜ್ಯ ಸರ್ಕಾರದಿಂದ" ಎಂಬ ಪದಗಳ ತರುವಾಯ "ಅಥವಾ ಆಯುಕ್ತರಿಂದ" ಎಂಬ ಪದಗಳನ್ನು ಸೇರಿಸತಕ್ಕದ್ದು;

(ಬಿ) (ಡಿ) ಖಂಡದಲ್ಲಿ "ರಾಜ್ಯ ಸರ್ಕಾರದಿಂದ" ಎಂಬ ಪದಗಳ ತರುವಾಯ "ಅಥವಾ ಆಯುಕ್ತರಿಂದ" ಎಂಬ ಪದಗಳನ್ನು ಸೇರಿಸತಕ್ಕದ್ದು.

(ii) (2)ನೇ ಉಪ–ಪ್ರಕರಣದ ತರುವಾಯ ಈ ಮುಂದಿನದನ್ನು ಸೇರಿಸತಕ್ಕದ್ದು, ಎಂದರೆ:–

"(2–ಎ) (2)ನೇ ಉಪ–ಪ್ರಕರಣದ (ಸಿ) ಖಂಡದಲ್ಲಿ ಏನೇ ಒಳಗೊಂಡಿದ್ದರೂ, ಆಯುಕ್ತರು ಅಧಿಸೂಚಿಸಬಹುದಾದಂತೆ ಯಾವುದೇ ನಿರ್ದಿಷ್ಟಪಡಿಸಿದ ವರ್ಗದ ಸರಕುಗಳು ಅಥವಾ ಯಾವುದೇ ನಿರ್ದಿಷ್ಟಪಡಿಸಿದ ವರ್ಗದ ವ್ಯಾಪಾರಿಗಳಿಗೆ ಸೇರಿದ ಸರಕುಗಳು ಅಥವಾ ಯಾವುದೇ ನಿರ್ದಿಷ್ಟಪಡಿಸಿದ ವ್ಯವಹಾರಗಳಿಂದಾಗಿ ಸರಕುಗಳನ್ನು ಸಾಗಿಸುತ್ತಿರುವ ಸರಕು ಸಾಗಣೆ ವಾಹನಗಳ ಮಾಲೀಕ ಅಥವಾ ಪ್ರಭಾರದಲ್ಲಿರುವ ಒಬ್ಬ ವ್ಯಕ್ತಿಯು,–

(ಎ) ಸರಕುಗಳ ಸಾಗಾಣೆಯು ಪ್ರಾರಂಭವಾಗುವ ಸ್ಥಳದಿಂದ ಅವುಗಳನ್ನು ತಲುಪಿಸಬೇಕಾದ ರಾಜ್ಯದಲ್ಲಿಯ ಸ್ಥಳಕ್ಕೆ ಸಾಮಾನ್ಯವಾಗಿ ತೆಗೆದುಕೊಂಡು ಹೋಗುವ ಮಾರ್ಗದಲ್ಲಿ ಇರುವ ಚೆಕ್‌ಪೋಸ್ಟ್ ಅಥವಾ ಸುಂಕದಕಟ್ಟೆಯಲ್ಲಿ ವರದಿ ಮಾಡಿಕೊಳ್ಳತಕ್ಕದ್ದು;

(ಬಿ) (2)ನೇ ಉಪ–ಪ್ರಕರಣದಲ್ಲಿ ನಿರ್ದಿಷ್ಟಪಡಿಸಿದ ಅಧಿಕಾರಿಯ ಮುಂದೆ, ಅಧಿಸೂಚನೆಯಲ್ಲಿ ನಿರ್ದಿಷ್ಟಪಡಿಸಬಹುದಾದಂತೆ ಸರಕು ಕಳುಹಿಸುವವನಿಂದ ಅಥವಾ ಸರಕು ಸ್ವೀಕರಿಸುವವನಿಂದ ಸಾಗಿಸುತ್ತಿರುವ ಸರಕುಗಳ ವಿವರಗಳನ್ನು ವೆಬ್‌ಸೈಟ್‌ನಲ್ಲಿ ನಮೂದು ಮಾಡಿರುವ ರುಜುವಾತನ್ನು ಸಲ್ಲಿಸತಕ್ಕದ್ದು; ಮತ್ತು

(ಸಿ) ಹಾಗೆ ಅದನ್ನು ಸಲ್ಲಿಸಿದ ತರುವಾಯ, ಅಧಿಕಾರಿಯು, ಸರಕು ವಾಹನವು ಮುಂದೆ ಸಾಗಲು ಅನುಮತಿಸಬಹುದು.

(2–ಬಿ) ಚೆಕ್‌ಪೋಸ್ಟ್ ಅಥವಾ ಸುಂಕದಕಟ್ಟೆಯ ಪ್ರಭಾರದಲ್ಲಿರುವ ಅಧಿಕಾರಿಗೆ ಅಥವಾ (2)ನೇ ಉಪ–ಪ್ರಕರಣದ ಅಡಿಯಲ್ಲಿ ಪ್ರಾಧಿಕೃತನಾದ ಅಧಿಕಾರಿಗೆ, (2–ಎ) ಉಪ–ಪ್ರಕರಣದ (ಎ) ಖಂಡದ ಉಪಬಂಧಗಳ ಯಾವುದೇ ಉಲ್ಲಂಘನೆಯಾಗಿದೆ ಎಂದು ಅಥವಾ ಅನುಸರಣೆಯಾಗಿಲ್ಲವೆಂದು ಅಥವಾ (2–ಎ) ಉಪ–ಪ್ರಕರಣದ (ಬಿ) ಖಂಡದಲ್ಲಿ ನಿರ್ದಿಷ್ಟಪಡಿಸಲಾಗಿರುವಂತೆ ವಿವರಗಳನ್ನು ನಮೂದಿಸಿಲ್ಲವೆಂದು ಅಥವಾ ನಮೂದಿಸಿರುವ ವಿವರಗಳು ಸರಿಯಾಗಿಲ್ಲವೆಂದು

ಮತ್ತು ಅಪೂರ್ಣವಾಗಿವೆಎಂದು ಹಾಗೂ ಅದಕ್ಕೆ ಸಾಕಷ್ಟು ಕಾರಣಗಳನ್ನು ಒದಗಿಸಿಲ್ಲವೆಂದು ತಿಳಿದುಬಂದರೆ, (12)ನೇ ಉಪ–ಪ್ರಕರಣದ ಅಡಿಯಲ್ಲಿ ನಿರ್ದಿಷ್ಟಪಡಿಸಿದಂತೆ ದಂಡವನ್ನು ವಿಧಿಸಲು ಆತನು ಮುಂದುವರೆಯತಕ್ಕದ್ದು."

(iii) (3)ನೇ ಉಪ–ಪ್ರಕರಣದಲ್ಲಿ "ಹತ್ತಿರದಲ್ಲಿರುವ ಚೆಕ್‌ಪೋಸ್ಟ್ ಅಥವಾ ಪೊಲೀಸ್ ಠಾಣೆಗೆ" ಎಂಬ ಪದಗಳಿಗೆ "ಹತ್ತಿರದಲ್ಲಿರುವ ಚೆಕ್‌ಪೋಸ್ಟ್ ಅಥವಾ ವಾಣಿಜ್ಯ ತೆರಿಗೆಗಳ ಇಲಾಖೆಯ ಕಛೇರಿಗೆ ಅಥವಾ ಪೊಲೀಸ್ ಠಾಣೆಗೆ ಅಥವಾ ಆಯುಕ್ತರು ಅಧಿಸೂಚಿಸಬಹುದಾದಂಥ ಯಾವುದೇ ಇತರ ಸ್ಥಳಕ್ಕೆ" ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು.

**11. 54ನೇ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 54ನೇ ಪ್ರಕರಣದ (1)ನೇ ಉಪ–ಪ್ರಕರಣದಲ್ಲಿ "52ನೇ ಪ್ರಕರಣದ (3)ನೇ ಉಪ–ಪ್ರಕರಣದ" ಎಂಬ ಅಂಕಿಗಳು, ಪದಗಳು ಮತ್ತು ಆವರಣ ಚಿಹ್ನೆಗಳಿಗೆ "53ನೇ ಪ್ರಕರಣದ" ಎಂಬ ಪದಗಳು ಮತ್ತು ಅಂಕಿ ಯನ್ನು ಪ್ರತಿಯೋಜಿಸತಕ್ಕದ್ದು ಮತ್ತು ಯಾವಾಗಲೂ ಪ್ರತಿಯೋಜಿಸಲಾಗಿದೆ ಎಂದು ಭಾವಿಸತಕ್ಕದ್ದು.

**12. ಹೊಸ 60ನೇ ಪ್ರಕರಣದ ಸೇರ್ಪಡೆ.–** ಮೂಲ ಅಧಿನಿಯಮದ 59ನೇ ಪ್ರಕರಣದ ತರುವಾಯ ಈ ಮುಂದಿನದನ್ನು ಸೇರಿಸತಕ್ಕದ್ದು, ಎಂದರೆ:–

"**60. ಸ್ಪಷ್ಟೀಕರಣ ಹಾಗೂ ಪೂರ್ವಭಾವಿ ನಿರ್ಣಯಗಳು.–** (1) ಆಯುಕ್ತನು, ಅಧಿನಿಯಮದ ಅಡಿಯಲ್ಲಿ ನಿರ್ದಿಷ್ಟಪಡಿಸಬಹುದಾದಂತೆ ಯಾವುದೇ ಪ್ರಕರಣ ಅಥವಾ ವರ್ಗಗಳ ಪ್ರಕರಣಗಳಲ್ಲಿ ಯಾವುವೇ ಸರಕುಗಳ ಸಂಬಂಧದಲ್ಲಿ ತೆರಿಗೆಯ ದರದ ಬಗ್ಗೆ ಅಥವಾ ಯಾವುದೇ ವ್ಯವಹರಣೆಯ ತೆರಿಗೆ ಬದ್ಧತೆಯ ಬಗ್ಗೆ ಅಥವಾ ಹೂಡುವಳಿ ತೆರಿಗೆಯ ಕಡಿತದ ಅರ್ಹತೆ ಬಗ್ಗೆ ಅಥವಾ ಅಧಿನಿಯಮದ ಅಡಿಯಲ್ಲಿ ಮೂಲದಲ್ಲಿಯೇ ತೆರಿಗೆ ಕಟಾಯಿಸುವ ಬದ್ಧತೆಯ ಬಗ್ಗೆ ಸ್ಪಷ್ಟೀಕರಣ ನೀಡಲು ಕನಿಷ್ಠ ಮೂವರು ಅಪರ ಆಯುಕ್ತರುಗಳನ್ನು ಒಳಗೊಂಡ "ಸ್ಪಷ್ಟೀಕರಣ ಹಾಗೂ ಪೂರ್ವಭಾವಿ ನಿರ್ಣಯಗಳ ಪ್ರಾಧಿಕಾರ" ವನ್ನು ರಚಿಸಬಹುದು.

(2) ಈ ಅಧಿನಿಯಮದ ಅಡಿಯಲ್ಲಿ ಸ್ಪಷ್ಟೀಕರಣ ಅಥವಾ ಪೂರ್ವಭಾವಿ ನಿರ್ಣಯವನ್ನು ಕೋರುವ ಯಾವೊಬ್ಬ ನೋಂದಾಯಿತ ವ್ಯಾಪಾರಿಯು ನಿಯಮಿಸಬಹುದಾದ ಅಂಥ ರೀತಿಯಲ್ಲಿ ಅಂಥ ಶುಲ್ಕವನ್ನು ಸಂದಾಯ ಮಾಡಿದ ಬಗ್ಗೆ ರುಜುವಾತನ್ನು ಒಳಗೊಂಡಂತೆ ಅಂಥ ನಮೂನೆಯಲ್ಲಿ ಪ್ರಾಧಿಕಾರಕ್ಕೆ ಅರ್ಜಿಯನ್ನು ಸಲ್ಲಿಸತಕ್ಕದ್ದು.

(3) ಯಾವೊಬ್ಬ ಅಧಿಕಾರಿ ಅಥವಾ ಇಲಾಖೆಯ ಯಾವುದೇ ಇತರ ಪ್ರಾಧಿಕಾರ ಅಥವಾ ಅಪೀಲು ನ್ಯಾಯಾಧೀಕರಣವು, ಈ ಅಧಿನಿಯಮದ ಅಡಿಯಲ್ಲಿ ಯಾವ ಪ್ರಕರಣದ ಸಂಬಂಧದಲ್ಲಿ ಅರ್ಜಿದಾರನು ಅರ್ಜಿಯನ್ನು ಹಾಕಿಕೊಂಡಿರುವನೋ ಅದರ ಬಗ್ಗೆ ತೀರ್ಮಾನವನ್ನು ಕೈಗೊಳ್ಳಲು ಮುಂದುವರೆಯತಕ್ಕದ್ದಲ್ಲ.

(4) ಪ್ರಾಧಿಕಾರದ ಆದೇಶವು, ಸ್ಪಷ್ಟೀಕರಣವನ್ನು ಕೋರಿದ ಅರ್ಜಿದಾರನಿಗೆ ಮಾತ್ರ ಬಂಧಕವಾಗಿರತಕ್ಕದ್ದು ಮತ್ತು ಸ್ಪಷ್ಟೀಕರಣ ಕೋರಿರುವ ಸರಕುಗಳ ಅಥವಾ ವ್ಯವಹಾರದ ಸಂಬಂಧದಲ್ಲಿ ಮಾತ್ರ ಹಾಗೂ ಅಂಥ ಅರ್ಜಿದಾರನಿಗೆ ಸಂಬಂಧಿಸಿದಂತೆ ಆಯುಕ್ತರನ್ನು ಹೊರತುಪಡಿಸಿದಂತೆ ಇಲಾಖೆಯ ಅಧಿಕಾರಿಗಳ ಮತ್ತು ಅಪೀಲು ನ್ಯಾಯಾಧೀಕರಣದ ಮುಂದಿರುವ ನಡವಳಿಗಳಲ್ಲಿ ಮಾತ್ರ ಬಂಧಕವಾಗಿರತಕ್ಕದ್ದು.

(5) ಈ ಪ್ರಕರಣದ ಅಡಿಯಲ್ಲಿ ಪ್ರಾಧಿಕಾರದ ಆದೇಶವು, ಕಾನೂನಿನಲ್ಲಿ ಅಥವಾ ಆದೇಶವನ್ನು ಹೊರಡಿಸಿದ ಸಂಗತಿಗಳ ಹಿನ್ನೆಲೆಯಲ್ಲಿ ಬದಲಾವಣೆಯಾಗದ ಹೊರತು, ಈ ಹಿಂದೆ ಹೇಳಿದಂತೆ ಬಂಧಕವಾಗಿರತಕ್ಕದ್ದು.

(6) ಪ್ರಾಧಿಕಾರಕ್ಕೆ ಯಾವೊಬ್ಬ ಅಧಿಕಾರಿಯು ಸಲ್ಲಿಸಿದ ಮನವಿಯ ಮೇಲೆ ಅಥವಾ ಅನ್ಯಥಾ, ತಾನು ಹೊರಡಿಸಿದ ಆದೇಶವನ್ನು, ಅರ್ಜಿದಾರನು ಮೋಸದಿಂದ ಅಥವಾ ಸಂಗತಿಗಳನ್ನು ತಪ್ಪಾಗಿ ನಿರೂಪಿಸುವ ಮೂಲಕ ಪಡೆದಿದ್ದಾನೆಂದು ಅದಕ್ಕೆ ಕಂಡುಬಂದರೆ, ಅದು ಆದೇಶದ ಮೂಲಕ, ಅಂಥ ಆದೇಶವನ್ನು ಆರಂಭದಿಂದಲೇ, ಶೂನ್ಯವಾದುದೆಂದು ಘೋಷಿಸಬಹುದು ಮತ್ತು ತದನಂತರ ಈ ಅಧಿನಿಯಮದ ಎಲ್ಲ ಉಪಬಂಧಗಳು, ಅಂಥ ಆದೇಶವನ್ನು ಎಂದೂ ಹೊರಡಿಸದಿದ್ದರೆ ಹೇಗೋ ಹಾಗೆ ಅರ್ಜಿದಾರನಿಗೆ ಅನ್ವಯಿಸತಕ್ಕದ್ದು.

(7) 64ನೇ ಪ್ರಕರಣದ (2)ನೇ ಉಪ–ಪ್ರಕರಣ ಮತ್ತು 66ನೇ ಪ್ರಕರಣದ ಉಪಬಂಧಗಳಿಗೆ ಒಳಪಟ್ಟು ಈ ಪ್ರಕರಣದ ಅಡಿಯಲ್ಲಿ ಹೊರಡಿಸಿದ ಪ್ರತಿಯೊಂದು ಆದೇಶವು ಅಂತಿಮವಾಗಿರತಕ್ಕದ್ದು."

**13. 72ನೇ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 72ನೇ ಪ್ರಕರಣದಲ್ಲಿ (2)ನೇ ಉಪ–ಪ್ರಕರಣದಲ್ಲಿ "ಒಂದು ವಿವರಪಟ್ಟಿಯನ್ನು" ಎಂಬ ಪದಗಳ ತರುವಾಯ "ಅಥವಾ ಒಂದು ವಿವರ ಪಟ್ಟಿಯ ತಯಾರಿಕೆಗಾಗಿ ಯಾವುದೇ ವಿವರಗಳನ್ನು" ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು.

**14. ಮೂರನೇ ಅನುಸೂಚಿಯ ತಿದ್ದುಪಡಿ.–** ಮೂಲ ಅಧಿನಿಯಮದ ಮೂರನೇ ಅನುಸೂಚಿಯ ಶೀರ್ಷಿಕೆಯಲ್ಲಿ "ಶೇಕಡ ನಾಲ್ಕರ ದರದಲ್ಲಿ ತೆರಿಗೆಗೆ ಗುರಿಯಾಗತಕ್ಕ ಸರಕುಗಳು" ಎಂಬ ಪದಗಳನ್ನು ಬಿಟ್ಟುಬಿಡತಕ್ಕದ್ದು.

**15. ಆರನೇ ಅನುಸೂಚಿಯ ತಿದ್ದುಪಡಿ.–** ಮೂಲ ಅಧಿನಿಯಮದ ಆರನೇ ಅನುಸೂಚಿಯಲ್ಲಿ, 3ನೇ ಅಂಕಣದಲ್ಲಿ,–

(i) 1 ರಿಂದ 6, 8 ರಿಂದ 11 ಮತ್ತು 13 ರಿಂದ 22ನೇ ಕ್ರಮಸಂಖ್ಯೆಗೆ ಸಂಬಂಧಪಟ್ಟ ನಮೂದುಗಳಲ್ಲಿ "ಶೇಕಡ ನಾಲ್ಕು" ಎಂಬ ಪದಗಳು ಬರುವ ಕಡೆಗಳಲ್ಲೆಲ್ಲಾ "ಶೇಕಡ ಐದು" ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು;

(ii) 23ನೇ ಕ್ರಮಸಂಖ್ಯೆಗೆ ಸಂಬಂಧಿಸಿದ ನಮೂದುಗಳಲ್ಲಿ "ಶೇಕಡ ಹನ್ನೆರಡುವರೆ" ಎಂಬ ಪದಗಳಿಗೆ "ಶೇಕಡ ಹದಿಮೂರುವರೆ" ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು.

**ಉದ್ದೇಶಗಳು ಮತ್ತು ಕಾರಣಗಳ ಹೇಳಿಕೆ**

ಆಯವ್ಯಯದಲ್ಲಿ ಮಾಡಿದ ಪ್ರಸ್ತಾವಗಳನ್ನು ಜಾರಿಗೊಳಿಸುವುದಕ್ಕಾಗಿ ಮತ್ತು ಅದಕ್ಕೆ ಸಂಬಂಧಪಟ್ಟ ವಿಷಯಗಳಿಗಾಗಿ ಹಾಗೂ ಮುಖ್ಯವಾಗಿ ಈ ಮುಂದಿನವುಗಳಿಗಾಗಿ ಉಪಬಂಧ ಕಲ್ಪಿಸುವುದಕ್ಕಾಗಿ ಕರ್ನಾಟಕ ಮೌಲ್ಯವರ್ಧಿತ ತೆರಿಗೆ ಅಧಿನಿಯಮ, 2003ನ್ನು ತಿದ್ದುಪಡಿ ಮಾಡುವುದು ಅವಶ್ಯಕವೆಂದು ಪರಿಗಣಿಸಲಾಗಿದೆ:–

(i) ಲೆಕ್ಕ ನಿರ್ವಹಣೆಯನ್ನು ಹಾಗೂ ತೆರಿಗೆ ಕಾನೂನು ಪಾಲನೆಯನ್ನು ಸರಳೀಕರಿಸುವುದಕ್ಕಾಗಿ ಸರಕುಗಳ ಗರಿಷ್ಠ ಚಿಲ್ಲರೆ ಬೆಲೆಗಳ ಆಧಾರದ ಮೇಲೆ ಯಾವುದೇ ಸರಕುಗಳ ಮೇಲೆ ತೆರಿಗೆ ಸಂದಾಯ ಆಯ್ಕೆ ಯೋಜನೆಗೆ ಅವಕಾಶ ಕಲ್ಪಿಸುವುದು;

(ii) ನೋಂದಾಯಿತರಾಗದೇ ಚಿಲ್ಲರೆ ವ್ಯಾಪಾರಿಗಳು ಮಾಡುವ ಮೌಲ್ಯವರ್ಧನೆಯ ಮೇಲೆ ತೆರಿಗೆ ಸಂದಾಯವನ್ನು ಖಚಿತಪಡಿಸಿ ಕೊಳ್ಳಲು ತಂಬಾಕು ಉತ್ಪನ್ನಗಳ ಗರಿಷ್ಟ ಚಿಲ್ಲರೆ ಬೆಲೆಯ ಮೇಲೆ ತೆರಿಗೆ ವಿಧಿಸಲು ಉಪಬಂಧ ಕಲ್ಪಿಸುವುದು;

(iii) ತೆರಿಗೆಯ ಕಾನೂನು ಪಾಲನೆಯನ್ನು ಸರಳೀಕರಿಸುವುದಕ್ಕಾಗಿ ಹಾಗೂ ವಿವಾದಗಳನ್ನು ತಪ್ಪಿಸುವುದಕ್ಕಾಗಿ ಸ್ಪಷ್ಟೀಕರಣ ಹಾಗೂ ಪೂರ್ವಭಾವಿ ನಿರ್ಣಯಗಳ ಪ್ರಾಧಿಕಾರವನ್ನು ರಚಿಸುವುದಕ್ಕಾಗಿ ಉಪಬಂಧ ಕಲ್ಪಿಸುವುದು;

(iv) ಸರ್ಕಾರಕ್ಕೆ ಬಾಕಿ ಇರುವ ತೆರಿಗೆಯ ಸಂದಾಯವನ್ನು ಯಾವುದೇ ವಿಳಂಬವಿಲ್ಲದೆ ಪಾವತಿಸುವುದನ್ನು ಖಚಿತಪಡಿಸಿಕೊಳ್ಳುವುದಕ್ಕಾಗಿ, ವಿದ್ಯುದ್ಮಾನ ವಿಧಾನದ ಮೂಲಕ ವಿವರ ಪಟ್ಟಿಗಳನ್ನು ಸಲ್ಲಿಸುವುದು ಮತ್ತು ತೆರಿಗೆಯನ್ನು ಸಂದಾಯ ಮಾಡುವುದು ಕಡ್ಡಾಯವಾಗುವ ವ್ಯಾಪಾರಿಗಳ ವರ್ಗವನ್ನು ಅಧಿಸೂಚಿಸುವುದಕ್ಕೆ ವಾಣಿಜ್ಯ ತೆರಿಗೆಗಳ ಆಯುಕ್ತರಿಗೆ ಅಧಿಕಾರ ನೀಡುವುದು;

(v) ಸರಕು ವಾಹನಗಳನ್ನು ತಡೆಯುವುದಕ್ಕಾಗಿ ಮತ್ತು ಪರೀಕ್ಷಿಸುವುದಕ್ಕಾಗಿ ಅಧಿಕಾರಿಗಳನ್ನು ಪ್ರಾಧಿಕಾರಿಸುವುದಕ್ಕಾಗಿ ಅಧಿಸೂಚಿಸಲು ವಾಣಿಜ್ಯ ತೆರಿಗೆಗಳ ಆಯುಕ್ತರಿಗೆ ಅಧಿಕಾರವನ್ನು ನೀಡುವುದು;

(vi) ಚೆಕ್‌ಪೋಸ್ಟುಗಳಲ್ಲಿ ಮತ್ತು ಇತರ ಸ್ಥಳಗಳಲ್ಲಿ ಸರಕು ವಾಹನಗಳನ್ನು ಶೀಘ್ರವಾಗಿ ಪರೀಕ್ಷಿಸಲು ಅನುಕೂಲವಾಗುವಂತೆ ಅವುಗಳಲ್ಲಿ ಸಾಗಿಸುತ್ತಿರುವ ಸರಕುಗಳ ವಿವರಗಳನ್ನು ವೆಬ್‌ಸೈಟ್‌ನಲ್ಲಿ ನಮೂದಿಸುವಂತೆ ನಿರ್ದಿಷ್ಟಪಡಿಸಿ ಅಧಿಸೂಚಿಸುವುದಕ್ಕೆ ವಾಣಿಜ್ಯ ತೆರಿಗೆಗಳ ಆಯುಕ್ತರಿಗೆ ಅಧಿಕಾರವನ್ನು ನೀಡುವುದು;

(vii) ಸರಕು ವಾಹನಗಳ ಮಾಲೀಕರು ಅಥವಾ ಪ್ರಭಾರದಲ್ಲಿರುವ ವ್ಯಕ್ತಿಗಳು, ಅವುಗಳನ್ನು ಚೆಕ್‌ಪೋಸ್ಟ್ ಅಥವಾ ಸುಂಕದಕಟ್ಟೆಗಳಲ್ಲದ ಇತರ ಸ್ಥಳಗಳಿಗೆ ಪರೀಕ್ಷೆಗಾಗಿ ತೆಗೆದುಕೊಂಡು ಹೋಗಬೇಕಾದ ಸ್ಥಳಗಳನ್ನು ಅಧಿಸೂಚಿಸುವುಕ್ಕೆ ವಾಣಿಜ್ಯ ತೆರಿಗೆಗಳ ಆಯುಕ್ತರಿಗೆ ಅಧಿಕಾರವನ್ನು ನೀಡುವುದು;

(viii) ವಿವರ ಪಟ್ಟಿಗಳ ತಯಾರಿಕೆಗಾಗಿ ತಪ್ಪು ವಿವರಗಳನ್ನು ಸಲ್ಲಿಸಿದ್ದಕ್ಕಾಗಿ ದಂಡವನ್ನು ವಿಧಿಸುವುದಕ್ಕೆ ಉಪಬಂಧ ಕಲ್ಪಿಸುವುದು.

ಕೆಲವು ಪ್ರಸ್ತುತ ಉಪಬಂಧಗಳನ್ನು ಸರಳಗೊಳಿಸುವುದಕ್ಕಾಗಿ, ಕೆಲವು ಅನುಷಂಗಿಕ ಮತ್ತು ಪ್ರಾಸಂಗಿಕ ತಿದ್ದುಪಡಿಗಳನ್ನು ಹಾಗೂ ಇತರ ತಿದ್ದುಪಡಿಗಳನ್ನು ಸಹ ಮಾಡಲಾಗಿದೆ.

ಆದ್ದರಿಂದ ಈ ವಿಧೇಯಕ.

**ಆರ್ಥಿಕ ಜ್ಞಾಪನ**

ಪ್ರಸ್ತಾವಿತ ಕ್ರಮವು ಯಾವುದೇ ಹೆಚ್ಚಿನ ವೆಚ್ಚವನ್ನು ಒಳಗೊಂಡಿರುವುದಿಲ್ಲ.

**ಪ್ರತ್ಯಾಯೋಜಿತ ಶಾಸನ ರಚನೆಗೆ ಸಂಬಂಧಿಸಿದ ಜ್ಞಾಪನ ಪತ್ರ**

**ಖಂಡ 2.–** 2ನೇ ಖಂಡದ (iii) ನೇ ಉಪ–ಖಂಡದ ಅಡಿಯಲ್ಲಿ ಸೇರಿಸಲು ಉದ್ದೇಶಿಸಿರುವ 4ನೇ ಪ್ರಕರಣದ (5)ನೇ ಉಪ–ಪ್ರಕರಣವು, ತಂಬಾಕು ಉತ್ಪನ್ನಗಳ ಮೇಲೆ ಗರಿಷ್ಠ ಚಿಲ್ಲರೆ ಬೆಲೆ ಆಧಾರದ ಮೇಲೆ

ತೆರಿಗೆ ಸಂದಾಯ ಮಾಡುವ ಬಗ್ಗೆ ಐದುನೂರು ರೂಪಾಯಿಗಳಿಗೆ ಮೀರಿದ, ಬೆಲೆಯನ್ನು ಅಧಿಸೂಚಿಸಲು ವಾಣಿಜ್ಯ ತೆರಿಗೆಗಳ ಆಯುಕ್ತರಿಗೆ ಅಧಿಕಾರವನ್ನು ನೀಡುತ್ತದೆ.

**ಖಂಡ 9.–** 9ನೇ ಖಂಡದ ಅಡಿಯಲ್ಲಿ ಸೇರಿಸಲು ಉದ್ದೇಶಿಸಿರುವ 35ನೇ ಪ್ರಕರಣದ (1)ನೇ ಉಪ–ಪ್ರಕರಣವು, ವಿದ್ಯುನ್ಮಾನ ವಿಧಾನದಲ್ಲಿ ವಿವರ ಪಟ್ಟಿಗಳನ್ನು ಸಲ್ಲಿಸುವುದು ಮತ್ತು ವಿದ್ಯುನ್ಮಾನದ ಮೂಲಕ ತೆರಿಗೆ ಸಂದಾಯಿಸುವುದು ಅಗತ್ಯಪಡಿಸಿದ ನೋಂದಾಯಿತ ವ್ಯಾಪಾರಿಗಳ ವರ್ಗವನ್ನು ಅಧಿಸೂಚಿಸಲು ವಾಣಿಜ್ಯ ತೆರಿಗೆಗಳ ಆಯುಕ್ತರಿಗೆ ಅಧಿಕಾರವನ್ನು ನೀಡುತ್ತದೆ.

**ಖಂಡ 10(i).-** 10ನೇ ಖಂಡದ (i)ನೇ ಉಪ–ಖಂಡದ ಅಡಿಯಲ್ಲಿ ತಿದ್ದುಪಡಿ ಮಾಡಲು ಉದ್ದೇಶಿಸಿದ 53ನೇ ಪ್ರಕರಣದ (2)ನೇ ಉಪ–ಪ್ರಕರಣವು ಸರಕು ವಾಹನಗಳನ್ನು ತಡೆಯಲು ಮತ್ತು ಪರೀಕ್ಷಿಸಲು ಪ್ರಾಧೀಕರಿಸಲಾದ ಅಧಿಕಾರಿಗಳನ್ನು ಅಧಿಸೂಚಿಸಲು ವಾಣಿಜ್ಯ ತೆರಿಗೆಗಳ ಆಯುಕ್ತರಿಗೆ ಅಧಿಕಾರವನ್ನು ನೀಡುತ್ತದೆ.

**ಖಂಡ 10(ii).-** 10ನೇ ಖಂಡದ (ii)ನೇ ಉಪ–ಖಂಡದ ಅಡಿಯಲ್ಲಿ ಸೇರಿಸಲು ಉದ್ದೇಶಿಸಿದ 53ನೇ ಪ್ರಕರಣದ (2–ಎ)ನೇ ಉಪ–ಪ್ರಕರಣವು, ರಾಜ್ಯದ ಚೆಕ್‌ಪೋಸ್ಟ್‌ಗಳ ಮೂಲಕ ಹಾದು ಹೋಗುವ ಸರಕು ವಾಹನಗಳಲ್ಲಿ, ಸಾಗಾಣಿಕೆಯಾಗುತ್ತಿರುವ ಸರಕುಗಳನ್ನು ಕಳುಹಿಸುವವನು ಅಥವಾ ಸ್ವೀಕರಿಸುವವನು ತಮಗೆ ಸೇರಿದ ಸರಕುಗಳ ವಿವರಗಳನ್ನು ನಮೂದಿಸುವ ವೆಬ್‌ಸೈಟ್ ಮತ್ತು ಅಂಥ ನಮೂದುಗಳನ್ನು ಮಾಡುವ ವಿಧಾನ ಇವುಗಳನ್ನು ಅಧಿಸೂಚಿಸುವುದಕ್ಕಾಗಿ ವಾಣಿಜ್ಯ ತೆರಿಗೆಗಳ ಆಯುಕ್ತರಿಗೆ ಅಧಿಕಾರವನ್ನು ನೀಡುತ್ತದೆ.

**ಖಂಡ 10(iii).-** 10ನೇ ಖಂಡದ (iii)ನೇ ಉಪ–ಖಂಡದ ಅಡಿಯಲ್ಲಿ ತಿದ್ದುಪಡಿ ಮಾಡಲು ಉದ್ದೇಶಿಸಿದ 53ನೇ ಪ್ರಕರಣದ (3)ನೇ ಉಪ–ಪ್ರಕರಣವು, ಸರಕು ವಾಹನಗಳನ್ನು ಅವುಗಳ ಪರಿಶೀಲನೆಗಾಗಿ ತೆಗೆದುಕೊಂಡು ಹೋಗಲು ಸರಕು ವಾಹನಗಳ ಮಾಲೀಕ ಅಥವಾ ಅದರ ಪ್ರಭಾರದಲ್ಲಿರುವ ವ್ಯಕ್ತಿಗೆ ನಿರ್ದೇಶಿಸಬೇಕಾದ ಚೆಕ್‌ಪೋಸ್ಟ್ ಅಥವಾ ಸುಂಕದಕಟ್ಟೆಗಳಲ್ಲದ ಇತರ ಸ್ಥಳಗಳನ್ನು ಅಧಿಸೂಚಿಸಲು ವಾಣಿಜ್ಯ ತೆರಿಗೆಗಳ ಆಯುಕ್ತರಿಗೆ ಅಧಿಕಾರವನ್ನು ನೀಡುತ್ತದೆ.

**ಖಂಡ 12.-** 12ನೇ ಖಂಡದ ಅಡಿಯಲ್ಲಿ ಸೇರಿಸಲು ಉದ್ದೇಶಿಸಿದ ಹೊಸ 60ನೇ ಪ್ರಕರಣದ (1)ನೇ ಉಪ–ಪ್ರಕರಣವು, ಸ್ಪಷ್ಟೀಕರಣ ಹಾಗೂ ಪೂರ್ವಭಾವಿ ನಿರ್ಣಯಗಳ ಪ್ರಾಧಿಕಾರದ ರಚನೆಯನ್ನು ಅಧಿಸೂಚಿಸಲು ವಾಣಿಜ್ಯ ತೆರಿಗೆಗಳ ಆಯುಕ್ತರಿಗೆ ಅಧಿಕಾರವನ್ನು ನೀಡುತ್ತದೆ.

ಪ್ರಸ್ತಾವಿತ ಶಾಸನ ರಚನಾಧಿಕಾರದ ಪ್ರತ್ಯಾಯೋಜನೆಯು ಸಾಮಾನ್ಯ ಸ್ವರೂಪದ್ದಾಗಿದೆ.

**ಬಿ.ಎಸ್. ಯಡಿಯೂರಪ್ಪ**
ಮುಖ್ಯಮಂತ್ರಿಗಳು ಮತ್ತು
ಆರ್ಥಿಕ ಸಚಿವರು

**ಎಸ್.ಬಿ. ಪಾಟೀಲ್**
ಕಾರ್ಯದರ್ಶಿ
ಕರ್ನಾಟಕ ವಿಧಾನ ಸಭೆ

**ಅನುಬಂಧ**

**ಕರ್ನಾಟಕ ಮೌಲ್ಯವರ್ಧಿತ ತೆರಿಗೆ ಅಧಿನಿಯಮ, 2003ರ**

**(2004ರ ಕರ್ನಾಟಕ ಅಧಿನಿಯಮ 32) ಉದ್ಧೃತ ಭಾಗ**

XX XX XX

**4. ತೆರಿಗೆ ಬದ್ಧತೆ ಮತ್ತು ಅದರ ದರಗಳು.–** (1) 22 ಮತ್ತು 24ನೇ ಪ್ರಕರಣಗಳಲ್ಲಿ ನಿರ್ದಿಷ್ಟಪಡಿಸಿದಂತೆ ನೋಂದಾಯಿತನಾದ ಅಥವಾ ನೋಂದಾಯಿತನಾಗಲು ಅಗತ್ಯಪಡಿಸಲಾದ ಪ್ರತಿಯೊಬ್ಬ ವ್ಯಾಪಾರಿಯು ತನ್ನ ತೆರಿಗೆಗೆ ಗುರಿಯಾಗತಕ್ಕ ವಹಿವಾಟಿನ ಮೇಲೆ,

(ಎ) ಈ ಮುಂದಿನಂತೆ ಎಂದರೆ,–

(i) ಎರಡನೇ ಅನುಸೂಚಿಯಲ್ಲಿ ನಮೂದಿಸಿದ ಸರಕುಗಳ ಸಂಬಂಧದಲ್ಲಿ ಶೇಕಡಾ ಒಂದರ ದರದಲ್ಲಿ,

(ii) ಮೂರನೇ ಅನುಸೂಚಿಯಲ್ಲಿ ನಮೂದಿಸಿದ ಸರಕುಗಳ ಸಂಬಂಧದಲ್ಲಿ ಶೇಕಡಾ ನಾಲ್ಕರ ದರದಲ್ಲಿ, ಮತ್ತು

(iii) ನಾಲ್ಕನೇ ಅನುಸೂಚಿಯಲ್ಲಿ ನಮೂದಿಸಿದ ಸರಕುಗಳ ಸಂಬಂಧದಲ್ಲಿ ಶೇಕಡಾ ಇಪ್ಪತ್ತರ ದರದಲ್ಲಿ

(ಬಿ) ಇತರ ಸರಕುಗಳ ಸಂಬಂಧದಲ್ಲಿ ಶೇಕಡಾ ಹನ್ನೆರಡುವರೆಯ ದರದಲ್ಲಿ,

– ತೆರಿಗೆಯನ್ನು ಸಂದಾಯ ಮಾಡಲು ಬದ್ಧನಾಗಿರತಕ್ಕದ್ದು.

XX XX XX

(3) ರಾಜ್ಯ ಸರ್ಕಾರವು, ಅಧಿಸೂಚನೆಯ ಮೂಲಕ, ಅಧಿಸೂಚನೆಯಲ್ಲಿ ನಿರ್ದಿಷ್ಟಪಡಿಸಬಹುದಾದಂಥ ನಿರ್ಬಂಧಗಳು ಮತ್ತು ಷರತ್ತುಗಳಿಗೆ ಒಳಪಟ್ಟು ಯಾವುವೇ ಸರಕುಗಳ ಸಂಬಂಧದಲ್ಲಿ (1)ನೇ ಉಪ ಪ್ರಕರಣದ ಅಡಿಯಲ್ಲಿ ಸಂದಾಯ ಮಾಡಬೇಕಾದ ತೆರಿಗೆಯನ್ನು ಕಡಿಮೆ ಮಾಡಬಹುದು.

(4) (1)ನೇ ಉಪಪ್ರಕರಣದಲ್ಲಿ ಏನೇ ಒಳಗೊಂಡಿದ್ದರೂ, ನಿಯಮಿಸಬಹುದಾದಂಥ ಷರತ್ತುಗಳಿಗೆ ಒಳಪಟ್ಟು, ಪ್ರತಿಯೊಬ್ಬ ವ್ಯಾಪಾರಿಯು, ಮೂರನೇ ಅನುಸೂಚಿಯ 60ನೇ ಕ್ರಮ ಸಂಖ್ಯೆಯಲ್ಲಿ ನಿರ್ದಿಷ್ಟಪಡಿಸಿದ ಸರಕುಗಳ ಮೇಲಿನ ತೆರಿಗೆಯನ್ನು, ಕಂಟೇನರ್‌ನ ಅಥವಾ ಅದರ ಪ್ಯಾಕಿನ ಲೇಬಲ್ ಮೇಲೆ ಸೂಚಿಸಲಾದ ಗರಿಷ್ಠ ಚಿಲ್ಲರೆ ಬೆಲೆಯ ಮೇಲೆ ಅಥವಾ ಸಂದಾಯವಾಗತಕ್ಕ ತೆರಿಗೆಗೆ ಸಮನಾದ ಮೊಬಲಗನ್ನು ಕಡಿತಗೊಳಿಸಿದಂಥ ಗರಿಷ್ಠ ಚಿಲ್ಲರೆ ಬೆಲೆಯ ಮೇಲೆ][2] ಸಂದಾಯ ಮಾಡಲು ಆಯ್ಕೆ ಮಾಡಿಕೊಂಡರೆ, ಹಾಗೆ ಸಂದಾಯ ಮಾಡಬಹುದು.

XX XX XX

**5. ತೆರಿಗೆ ವಿನಾಯಿತಿ.–** (1) ಒಂದನೇ ಅನುಸೂಚಿಯಲ್ಲಿ ನಿರ್ದಿಷ್ಟಪಡಿಸಿದ ಸರಕುಗಳನ್ನು ಅಥವಾ ರಾಜ್ಯ ಸರ್ಕಾರವು ಅಧಿಸೂಚನೆಯ ಮೂಲಕ ನಿರ್ದಿಷ್ಟಪಡಿಸಬಹುದಾದ ಯಾವುವೇ ಇತರ ಸರಕುಗಳನ್ನು, ಅಧಿಸೂಚನೆಯಲ್ಲಿ ನಿರ್ದಿಷ್ಟಪಡಿಸಬಹುದಾದಂಥ ನಿರ್ಬಂಧಗಳು ಮತ್ತು ಷರತ್ತುಗಳಿಗೆ ಒಳಪಟ್ಟು ಈ ಅಧಿನಿಯಮದ ಅಡಿಯಲ್ಲಿ ಸಂದಾಯ ಮಾಡಬೇಕಾದ ತೆರಿಗೆಯಿಂದ ವಿನಾಯಿತಿಗೊಳಿಸತಕ್ಕದ್ದು.

XX XX XX

**18. ಕ್ಯಾಂಟೀನುಗಳ ಸಂದರ್ಭದಲ್ಲಿ ಮೂಲದಲ್ಲಿ ತೆರಿಗೆಯನ್ನು ಮುರಿದುಕೊಳ್ಳುವುದು.–** (1) ಈ ಅಧಿನಿಯಮದಲ್ಲಿ ಏನೇ ಒಳಗೊಂಡಿದ್ದರೂ, ಒಂದು ಕಾರ್ಖಾನೆ ಅಥವಾ ಇತರ ಕೈಗಾರಿಕಾ ಉದ್ಯಮವು ಅಥವಾ ಯಾವುದೇ ಇತರ ಉದ್ಯಮ ಸಂಸ್ಥೆಯು, ಒಂದು ಕ್ಯಾಂಟೀನನ್ನು ಅಥವಾ ಕೆಫಿಟೇರಿಯವನ್ನು ಅಥವಾ ರೆಸ್ಟೋರೆಂಟನ್ನು ಅಥವಾ ಇತರ ಅದೇ ಬಗೆಯ ಸೌಲಭ್ಯ, ಒಬ್ಬ ವ್ಯಾಪಾರಿಯ ಮೂಲಕ, ಅಂಥ ಕಾರ್ಖಾನೆಗಳ ಅಥವಾ ಕೈಗಾರಿಕಾ ಉದ್ಯಮಗಳ ಅಥವಾ ಉದ್ಯಮ ಸಂಸ್ಥೆಗಳ ನೌಕರರಿಗೆ ಒಂದು ಸೌಕರ್ಯವಾಗಿ, ನಡೆಸುತ್ತಿದ್ದರೆ, ತಮ್ಮ ನೌಕರರಿಗೆ ಆಹಾರ ಮತ್ತು ಪಾನೀಯ ವಸ್ತುಗಳ ಮಾರಾಟದ ಸಂಬಂಧದಲ್ಲಿ, ಯಾವುದೇ ಹೆಸರಿನಿಂದ ಕರೆಯಲಾಗುವ ಅವರ ಕೊಡುಗೆಯಾಗಿ ಅಂಥ ವ್ಯಾಪಾರಿಗೆ ಅವರು ಸಂದಾಯಮಾಡತಕ್ಕ ಯಾವುದೇ ಮೊಬಲಗಿನಿಂದ, ನೌಕರರಿಂದ ಅಂಥ ವ್ಯಾಪಾರಿಯು ಸ್ವೀಕರಿಸಿದ ಅಥವಾ ಸ್ವೀಕರಿಸತಕ್ಕ ಒಟ್ಟು ಮಾರಾಟ ಬೆಲೆಯ ಮತ್ತು ಅಂಥ ವ್ಯಾಪಾರಿಗೆ ಅಂಥ ಕಾರ್ಖಾನೆಗಳು ಅಥವಾ ಕೈಗಾರಿಕಾ ಉದ್ಯಮಗಳು ಅಥವಾ ಉದ್ಯಮ ಸಂಸ್ಥೆಗಳು ಸಂದಾಯಮಾಡಿದ ಅಥವಾ ಸಂದಾಯಮಾಡತಕ್ಕ ಕೊಡುಗೆಯ ಶೇಕಡಾ ನಾಲ್ಕರ ದರದಲ್ಲಿ ಮೊಬಲಗನ್ನು ಮುರುಗಡೆಮಾಡತಕ್ಕದ್ದು.

XX XX XX

**18ಎ. ಕೆಲವು ಸರಕುಗಳ ಸಂಬಂಧದಲ್ಲಿ ಮೂಲದಲ್ಲಿಯೇ ತೆರಿಗೆಯನ್ನು ಮುರಿದುಕೊಳ್ಳುವುದು.–** (1) ಈ ಅಧಿನಿಯಮದಲ್ಲಿ ಏನೇ ಒಳಗೊಂಡಿದ್ದರೂ, ಉತ್ಪಾದನೆ ಅಥವಾ ಸಂಸ್ಕರಣೆಯಲ್ಲಿ ಬಳಸುವುದಕ್ಕಾಗಿ ಅಥವಾ ಆಯುಕ್ತರು ಅಧಿಸೂಚಿಸಬಹುದಾದಂತೆ ಯಾವುದೇ ಇತರ ಉದ್ದೇಶಕ್ಕಾಗಿ ಬಳಸುವುದಕ್ಕಾಗಿ ಎಣ್ಣೆಬೀಜಗಳು ಅಥವಾ ಕಚ್ಚಾ ಎಣ್ಣೆ ಅಥವಾ ಹಿಂಡಿ ಅಥವಾ ಕಬ್ಬಿಣದ ಮತ್ತು ಉಕ್ಕಿನ ಸ್ಕ್ರಾಪ್‌ಗಳು ಅಥವಾ ಆಯುಕ್ತರು ಅಧಿಸೂಚಿಸಬಹುದಾದ ಯಾವುವೇ ಇತರ ಸರಕುಗಳನ್ನು ಖರೀದಿಸುವ ಪ್ರತಿಯೊಬ್ಬ ನೋಂದಾಯಿತ ವ್ಯಾಪಾರಿಯು, ಅಂಥ ಸರಕುಗಳನ್ನು ತನಗೆ ಮಾರಾಟ ಮಾಡಿದ ನೋಂದಾಯಿತ ವ್ಯಾಪಾರಿಗೆ ತಾನು ಸಂದಾಯಮಾಡತಕ್ಕ ಮೊಬಲಗಿನಿಂದ, 4ನೇ ಪ್ರಕರಣದ ಅಡಿಯಲ್ಲಿ ಆ ಸರಕುಗಳ ಮಾರಾಟದ ಮೇಲೆ ಸಂದಾಯಮಾಡತಕ್ಕ ತೆರಿಗೆಗೆ ಸಮನಾದ ಮೊಬಲಗನ್ನು ಮುರಿದುಕೊಳ್ಳತಕ್ಕದ್ದು.

XX XX XX

(4) (1)ನೇ ಉಪ ಪ್ರಕರಣದ ಅಡಿಯಲ್ಲಿ ತೆರಿಗೆ ಮುರಿದುಕೊಳ್ಳುತ್ತಿರುವ ವ್ಯಾಪಾರಿಯು ತಾನು ಹಿಂದಿನ ತಿಂಗಳಲ್ಲಿ ಮುರುಗಡೆ ಮಾಡಿದ ತೆರಿಗೆಯ ವಿವರಗಳನ್ನು ಒಳಗೊಂಡ ನಿಯಮಿಸಲಾದ ನಮೂನೆಯಲ್ಲಿರುವ ಒಂದು ವಿವರಪಟ್ಟಿಯನ್ನು ನಿಯಮಿಸಲಾದ ಪ್ರಾಧಿಕಾರಕ್ಕೆ ಪ್ರತಿ ತಿಂಗಳೂ ಕಳುಹಿಸತಕ್ಕದ್ದು ಮತ್ತು ಹಾಗೆ ತಾನು ಮುರಿದುಕೊಂಡ ತೆರಿಗೆಯ ಮೊಬಲಗನ್ನು ಯಾವ ತಿಂಗಳಲ್ಲಿ ಅಂಥ ಮುರುಗಡೆಯನ್ನು ಮಾಡಲಾಗಿದೆಯೋ ಆ ಹಿಂದಿನ ತಿಂಗಳು ಮುಕ್ತಾಯವಾದ ತರುವಾಯ ಇಪ್ಪತ್ತು ದಿನಗಳ ಒಳಗೆ ಹಿಂದಿನ ತಿಂಗಳಿಗಾಗಿ ತಾನು ಸಂದಾಯ ಮಾಡಬೇಕಾಗಿದ್ದ ಯಾವುದೇ ನಿವ್ವಳ ತೆರಿಗೆಗೆ ಸಂಬಂಧಿಸಿದಂತೆ ತಾನು ಹಾಗೆ ಮುರಿದುಕೊಂಡ ತೆರಿಗೆಯ ಮೊಬಲಗನ್ನು ಸರಿಹೊಂದಿಸಿದ ತರುವಾಯ ಸಂದಾಯಮಾಡತಕ್ಕದ್ದು ಮತ್ತು ಹಾಗೆ

ಸಂದಾಯಮಾಡತಕ್ಕ ಮೊಬಲಗನ್ನು 42ನೇ ಪ್ರಕರಣದ ಉದ್ದೇಶಗಳಿಗಾಗಿ ಈ ಅಧಿನಿಯಮದ ಅಡಿಯಲ್ಲಿ ಬಾಕಿ ಇರುವ ಮೊಬಲಗು ಎಂದು ಭಾವಿಸತಕ್ಕದ್ದು.

(5) ಈ ಉಪಪ್ರಕರಣದ ಉಪಬಂಧಗಳನ್ನು ಪಾಲಿಸಲು ತಪ್ಪಿದರೆ ನಿಯಮಿಸಲಾದ ಪ್ರಾಧಿಕಾರಿಯು ತಾನು ಸೂಕ್ತವೆಂದು ಭಾವಿಸಿದಂಥ ವಿಚಾರಣೆಯನ್ನು ನಡೆಸಿದ ತರುವಾಯ ಮತ್ತು ಸಂಬಂಧಪಟ್ಟ ವ್ಯಾಪಾರಿಗೆ ಅಹವಾಲನ್ನು ಹೇಳಿಕೊಳ್ಳಲು ಅವಕಾಶವನ್ನು ನೀಡಿದ ತರುವಾಯ, ತನ್ನ ಅತ್ಯುತ್ತಮ ವಿವೇಚನೆಗನುಸಾರ ಅಂಥ ವ್ಯಾಪಾರಿಯು ಈ ಉಪಪ್ರಕರಣದ ಅಡಿಯಲ್ಲಿ ಸಂದಾಯ ಮಾಡತಕ್ಕ ಮೊಬಲಗನ್ನು ನಿರ್ಧರಿಸಬಹುದು ಮತ್ತು ಹಾಗೆ ನಿರ್ಧರಿಸಿದ ಮೊಬಲಗನ್ನು 42ನೇ ಪ್ರಕರಣದ ಉದ್ದೇಶಕ್ಕಾಗಿ ಈ ಅಧಿನಿಯಮದ ಅಡಿಯಲ್ಲಿ ಬಾಕಿಯಿರುವ ಮೊಬಲಗೆಂದು ಭಾವಿಸತಕ್ಕದ್ದು.

XX XX XX

**22. ನೋಂದಣಿಯ ಬದ್ಧತೆ.-** (1) ಕರ್ನಾಟಕ ಮಾರಾಟ ತೆರಿಗೆ ಅಧಿನಿಯಮ, 1957ರ (1957ರ ಕರ್ನಾಟಕ ಅಧಿನಿಯಮ 25) ಉಪಬಂಧಗಳ ಅಡಿಯಲ್ಲಿ ಲೆಕ್ಕಹಾಕಿದಾಗ 2005ರ ಮಾರ್ಚ್ ಮೂವತ್ತೊಂದನೇ ದಿನದಂದು ಕೊನೆಗೊಳ್ಳುವ ವರ್ಷದಲ್ಲಿ ಒಟ್ಟು ವಹಿವಾಟು ಎರಡು ಲಕ್ಷ ರೂಪಾಯಿಗಳನ್ನು ಮೀರುವ ಅಥವಾ ತನ್ನ ಒಟ್ಟು ವಹಿವಾಟು ಎರಡು ಲಕ್ಷ ರೂಪಾಯಿಗಳನ್ನು ಮೀರುತ್ತದೆಯೆಂದು ಸಕಾರಣವಾಗಿ ನಿರೀಕ್ಷಿಸುವ, ಪ್ರತಿಯೊಬ್ಬ ವ್ಯಾಪಾರಿಯು ನೋಂದಾಯಿತನಾಗಲು ಬದ್ಧನಾಗಿರತಕ್ಕದ್ದು ಮತ್ತು ಸರ್ಕಾರವು ಅಧಿಸೂಚಿಸಬಹುದಾದ ಅಂಥ ದಿನಾಂಕದಂದು ಅಂಥ ಬದ್ಧತೆಯನ್ನು ವರದಿ ಮಾಡತಕ್ಕದ್ದು.

(2) 2005ರ ಮಾರ್ಚ್ ಮೂವತ್ತೊಂದನೇ ದಿನದಂದು ಕೊನೆಗೊಳ್ಳುವ ವರ್ಷದ ನಂತರ ಯಾವುದೇ ವರ್ಷದಲ್ಲಿ, ಯಾವುದೇ ಸಮಯದಲ್ಲಿ, ತೆರಿಗೆಗೆ ಗುರಿಯಾಗತಕ್ಕ ತನ್ನ ವಹಿವಾಟು ಎರಡು ಲಕ್ಷ ರೂಪಾಯಿಗಳನ್ನು ಮೀರಬಹುದು ಎಂದು ಸಕಾರಣವಾಗಿ ನಂಬಿರುವ ಪ್ರತಿಯೊಬ್ಬ ವ್ಯಾಪಾರಿಯು ನೋಂದಾಯಿತನಾಗಲು ಬದ್ಧನಾಗಿರತಕ್ಕದ್ದು ಮತ್ತು ಅಂಥ ಬದ್ಧತೆಯನ್ನು ತಕ್ಷಣ ಅಥವಾ ಸರ್ಕಾರವು ಅಧಿಸೂಚಿಸಬಹುದಾದ ಅಂಥ ದಿನಾಂಕದಂದು ವರದಿ ಮಾಡತಕ್ಕದ್ದು.

(3) 3ನೇ ಪ್ರಕರಣದ ಅನುಸಾರವಾಗಿ ತೆರಿಗೆಯನ್ನು ವಿಧಿಸತಕ್ಕ ದಿನಾಂಕದ ತರುವಾಯದ ಯಾವುದೇ ಒಂದು ತಿಂಗಳಿನಲ್ಲಿ ತೆರಿಗೆಗೆ ಗುರಿಯಾಗತಕ್ಕ ವಹಿವಾಟು ಹದಿನೈದು ಸಾವಿರ ರೂಪಾಯಿಗಳನ್ನು ಮೀರುವ ಪ್ರತಿಯೊಬ್ಬ ವ್ಯಾಪಾರಿಯು ತಕ್ಷಣ ನೋಂದಾಯಿತನಾಗತಕ್ಕದ್ದು.

XX XX XX

**27. ನೋಂದಣಿಯ ರದ್ದಿಯಾತಿ.-** (1) ಈ ಮುಂದಿನ ಯಾವುದೇ ಸಂದರ್ಭದಲ್ಲಿ ಎಂದರೆ,-

(ಎ) ಒಬ್ಬ ನೋಂದಾಯಿತ ವ್ಯಾಪಾರಿಯು ಯಾವುದೇ ವ್ಯಾಪಾರವನ್ನು ಮುಂದುವರೆಸದಿದ್ದಲ್ಲಿ, ಪೂರ್ಣವಾಗಿ ವರ್ಗಾಯಿಸಿದ್ದಲ್ಲಿ ಅಥವಾ ಅನ್ಯಥಾ ವಿಲೆ ಮಾಡಿದ್ದಲ್ಲಿ; ಅಥವಾ

(ಬಿ) ವ್ಯಾಪಾರದ ಮಾಲೀಕತ್ವದ ಸ್ಥಾನಮಾನದಲ್ಲಿ ಯಾವುದೇ ಬದಲಾವಣೆಯಾಗಿದ್ದಲ್ಲಿ; ಅಥವಾ

(ಸಿ) ನೋಂದಾಯಿತ ವ್ಯಾಪಾರಿಯ ಸರಕುಗಳ ಮಾರಾಟದ ತೆರಿಗೆಗೆ ಗುರಿಯಾಗತಕ್ಕ ವಹಿವಾಟು ಹನ್ನೆರಡು ನಿರಂತರ ತಿಂಗಳುಗಳಯಾವುದೇ ಅವಧಿಯಲ್ಲಿ ಎರಡು ಲಕ್ಷ ರೂಪಾಯಿಗಳನ್ನು ಮೀರದಿದ್ದಲ್ಲಿ; ಅಥವಾ

(ಡಿ) ಒಬ್ಬ ವ್ಯಾಪಾರಿಯು ಯಾವುದೇ ತೆರಿಗೆಗೆ ಗುರಿಯಾಗತಕ್ಕ ಮಾರಾಟವನ್ನು ಮಾಡದೆ ತೆರಿಗೆಯ ಬೆಲೆ ಪಟ್ಟಿಗಳನ್ನು ನೀಡಿದಲ್ಲಿ, ಅಥವಾ

(ಇ)ಈ ಅಧಿನಿಯಮದ ಅಡಿಯಲ್ಲಿ ನೋಂದಾಯಿತನಾದ ಒಬ್ಬ ವ್ಯಾಪಾರಿಯು ಮೃತನಾದಲ್ಲಿ,

- ಮತ್ತು ಯಾವುವೇ ಉಚಿತ ಮತ್ತು ಸಾಕಷ್ಟು ಕಾರಣಗಳಿದ್ದರೆ, ನಿಯಮಿಸಲಾದ ಪ್ರಾಧಿಕಾರವು, ತಾನಾಗಿಯೇ ಆಗಲಿ ಅಥವಾ ವ್ಯಾಪಾರಿಯು ನೀಡಿದ ಅರ್ಜಿಯ ಮೇಲಾಗಲಿ ಅಥವಾ ಮರಣದ ಸಂದರ್ಭದಲ್ಲಿ, ನಿಯಮಿಸಲಾದ ವಿಧಾನದಲ್ಲಿ ಕಾನೂನುಬದ್ಧ ವಾರಸುದಾರರ ಅರ್ಜಿಯ ಮೇಲಾಗಲಿ, ಸಂದರ್ಭದ ಪರಿಸ್ಥಿತಿಯನ್ನು ಗಮನದಲ್ಲಿರಿಸಿಕೊಂಡು ಯಾವುದೇ ಪೂರ್ವ ದಿನಾಂಕವನ್ನು ಒಳಗೊಂಡಂತೆ ತಾನು ಸೂಕ್ತವೆಂದು ಭಾವಿಸಬಹುದಾದ ಅಂಥ ದಿನಾಂಕದಿಂದ ನೋಂದಣಿ ಪ್ರಮಾಣ ಪತ್ರವನ್ನು ರದ್ದುಗೊಳಿಸಬಹುದು.

XX XX XX

**31. ಲೆಕ್ಕ ಪತ್ರಗಳು.-** (1) ಪ್ರತಿಯೊಬ್ಬ ನೋಂದಾಯಿತ ವ್ಯಾಪಾರಿಯು ಮತ್ತು ಈ ಅಧಿನಿಯಮದ ಅಡಿಯಲ್ಲಿ ತೆರಿಗೆ ಸಂದಾಯ ಮಾಡಲು ಬದ್ಧನಾದ ಪ್ರತಿಯೊಬ್ಬ ವ್ಯಾಪಾರಿಯು, ಸಂದಾಯ ಮಾಡಿದ ಹೂಡುವಳಿ ತೆರಿಗೆ ಮತ್ತು ಸಂದಾಯ ಮಾಡಬೇಕಾದ ಹುಟ್ಟುವಳಿ ತೆರಿಗೆಯೂ ಸೇರಿದಂತೆ ಈ ಅಧಿನಿಯಮದ ಅಡಿಯಲ್ಲಿ ತೆರಿಗೆಯ ಪ್ರತಿಯೊಂದು ದರಕ್ಕೆ ಒಳಪಟ್ಟ ಸರಕುಗಳ ಮೌಲ್ಯಗಳನ್ನು ತೋರಿಸುವ ತನ್ನ ಎಲ್ಲಾ ಖರೀದಿಗಳ, ಸ್ವೀಕೃತಿಗಳ, ಮಾರಾಟಗಳ, ಇತರ ವಿಲೆಗಳ, ಉತ್ಪಾದನೆಯ, ತಯಾರಿಕೆಯ ಮತ್ತು ದಾಸ್ತಾನಿನ ನಿಜವಾದ ಮತ್ತು ಸರಿಯಾದ ಲೆಕ್ಕ ಪತ್ರಗಳನ್ನು ಕನ್ನಡ ಅಥವಾ ಇಂಗ್ಲೀಷ್ ಅಥವಾ ಹಿಂದಿ

ಅಥವಾ ಸರ್ಕಾರವು ಅಧಿಸೂಚನೆಯ ಮೂಲಕ ನಿರ್ದಿಷ್ಟಪಡಿಸಬಹುದಾದಂತೆ ಅಂಥ ಇತರ ಭಾಷೆಯಲ್ಲಿ ಇಡತಕ್ಕದ್ದು ಮತ್ತು ನಿರ್ವಹಿಸತಕ್ಕದ್ದು.

XX XX XX

(4) ಯಾರ ಒಟ್ಟು ವಹಿವಾಟು ಒಂದು ವರ್ಷದಲ್ಲಿ ನಲವತ್ತು ಲಕ್ಷ ರೂಪಾಯಿಗಳನ್ನು ಮೀರುವುದೋ, ಆ ಪ್ರತಿಯೊಬ್ಬ ವ್ಯಾಪಾರಿಯು, ತನ್ನ ಲೆಕ್ಕಪತ್ರಗಳನ್ನು ನಿಯಮಿಸಬಹುದಾದಂಥ ಷರತ್ತುಗಳಿಗೆ ಮತ್ತು ಅಂಥ ಮಿತಿಗಳಿಗೆ ಒಳಪಟ್ಟು ಒಬ್ಬ ಚಾರ್ಟೆಡ್ ಅಕೌಂಟೆಂಟ್ ಅಥವಾ ಕಾಸ್ಟ್ ಅಕೌಂಟೆಂಟ್ಅಥವಾ ಒಬ್ಬ ತೆರಿಗೆ ವೃತ್ತಿದಾರನಿಂದ ಪರಿಶೋಧಿಸತಕ್ಕದ್ದು ಮತ್ತು ಪರಿಶೋಧಿತ ಲೆಕ್ಕಪತ್ರಗಳ ವಿವರಣ ಪಟ್ಟಿಯ ಒಂದು ಪ್ರತಿಯನ್ನು ಮತ್ತು ನಿಯಮಿಸಲಾದ ದಸ್ತಾವೇಜುಗಳನ್ನು, ನಿಯಮಿಸಲಾದ ರೀತಿಯಲ್ಲಿ ನಿಯಮಿಸಲಾದ ಪ್ರಾಧಿಕಾರಕ್ಕೆ ಸಲ್ಲಿಸತಕ್ಕದ್ದು.

XX XX XX

**35. ವಿವರ ಪಟ್ಟಿಗಳು.–** (1) (2) ರಿಂದ (4)ನೇ ಉಪಪ್ರಕರಣಗಳಿಗೆ ಒಳಪಟ್ಟು ಪ್ರತಿಯೊಬ್ಬ ನೋಂದಾಯಿತ ವ್ಯಾಪಾರಿಯು ಮತ್ತು 9ನೇ ಪ್ರಕರಣದ (2)ನೇ ಉಪ-ಪ್ರಕರಣದ ಅಡಿಯಲ್ಲಿ ಸಂಗ್ರಹಿಸಲಾದ ತೆರಿಗೆ ಸಂದಾಯಕ್ಕೆ ಬದ್ಧವಾದ ಕೇಂದ್ರ ಸರ್ಕಾರ, ಒಂದು ರಾಜ್ಯ ಸರ್ಕಾರ, ಶಾಸನಬದ್ಧ ನಿಕಾಯ ಮತ್ತು ಒಂದು ಸ್ಥಳೀಯ ಪ್ರಾಧಿಕಾರವು ಎಲೆಕ್ಟ್ರಾನಿಕ್ ವಿಧಾನಗಳು ಸೇರಿದಂತೆ ಅಂಥ ನಮೂನೆಯಲ್ಲಿ ಮತ್ತು ವಿಧಾನದಲ್ಲಿ ಒಂದು ವಿವರ ಪಟ್ಟಿಯನ್ನು ಒದಗಿಸತಕ್ಕದ್ದು ಮತ್ತು ನಿಯಮಿಸಬಹುದಾದಂತೆ ಹಿಂದಿನ ತಿಂಗಳ ಕೊನೆಯ ತರುವಾಯದ ಇಪ್ಪತ್ತು ದಿನಗಳೊಳಗೆ ಅಥವಾ ಹದಿನೈದು ದಿನಗಳೊಳಗೆ ಅಥವಾ ಇತರೆ ಯಾವುದೇ ತೆರಿಗೆ ಅವಧಿಯೊಳಗೆ ಅಂಥ ವಿವರ ಪಟ್ಟಿಯ ಮೇಲೆ ಬಾಕಿ ಇರುವ ತೆರಿಗೆಯನ್ನು ಸಂದಾಯ ಮಾಡತಕ್ಕದ್ದು.

XX XX XX

**53. ಚೆಕ್‌ಪೋಸ್ಟ್‌ಗಳ ಸ್ಥಾಪನೆ ಮತ್ತು ಸಾಗಣೆಯಲ್ಲಿರುವ ಸರಕುಗಳ ಪರಿಶೀಲನೆ.–** (1) ರಾಜ್ಯದಲ್ಲಿನ ಯಾವುದೇ ಸ್ಥಳ ಅಥವಾ ಸ್ಥಳಗಳಲ್ಲಿ, ಈ ಅಧಿನಿಯಮದ ಅಡಿಯಲ್ಲಿ ತೆರಿಗೆಯನ್ನು ತಪ್ಪಿಸುವುದನ್ನು ತಡೆಹಿಡಿಯುವ ಅಥವಾ ಪ್ರತಿಬಂಧಿಸುವ ದೃಷ್ಟಿಯಿಂದ ರಾಜ್ಯ ಸರ್ಕಾರ ಅಥವಾ ಆಯುಕ್ತನು ಅವಶ್ಯಕವೆಂದು ಪರಿಗಣಿಸಿದಲ್ಲಿ ಅದು ಅಥವಾ ಅವನು, ಅಧಿಸೂಚಿಸಬಹುದಾದಂತೆ ಅಂಥ ಸ್ಥಳ ಅಥವಾ ಸ್ಥಳಗಳಲ್ಲಿ ಚೆಕ್‌ಪೋಸ್ಟ್‌ನ್ನು ಅಥವಾ ಸುಂಕದ ಕಟ್ಟೆಯನ್ನು ಅಥವಾ ಅವೆರಡನ್ನು ಸ್ಥಾಪಿಸುವಂತೆ ಅಧಿಸೂಚನೆಯ ಮೂಲಕ, ನಿರ್ದೇಶಿಸಬಹುದು.

(2) ಒಂದು ಸರಕು ವಾಹನ ಅಥವಾ ನಾವೆ, ಹಡಗು ಅಥವಾ ಅಂಥದೇ ನೌಕೆಯ ಮಾಲೀಕ ಅಥವಾ ಪ್ರಭಾರ ಹೊಂದಿದ ವ್ಯಕ್ತಿಯು,–

(ಎ) ತನ್ನ ಜೊತೆಯಲ್ಲಿ ಸಂದರ್ಭಾನುಸಾರ ಸರಕು ವಾಹನದ ದಾಖಲೆ, ಟ್ರಿಪ್‌ಶೀಟ್ ಅಥವಾ ಲಾಗ್ ಪುಸ್ತಕವನ್ನು ಒಯ್ಯತಕ್ಕದ್ದು; ಮತ್ತು

(ಬಿ) ಸರಕುಗಳ ವಾಹನ ಅಥವಾ ನಾವೆ, ಹಡಗು ಅಥವಾ ಅಂಥದೇ ನೌಕೆಯಲ್ಲಿ ಸಾಗಿಸುತ್ತಿರುವ ಸರಕುಗಳಿಗೆ ಸಂಬಂಧಪಟ್ಟಂತೆ, ನಿಯಮಿಸಬಹುದಾದಂಥ ಅಥವಾ ಆಯುಕ್ತರು ಅಧಿಸೂಚಿಸಬಹುದಾದಂತೆ ದಸ್ತಾವೇಜುಗಳನ್ನು ತನ್ನ ಜೊತೆಯಲ್ಲಿ ತೆಗೆದುಕೊಂಡು ಒಯ್ಯತಕ್ಕದ್ದು; ಮತ್ತು

(ಸಿ) ತಾನು ಹೋಗಬೇಕಾದ ಸ್ಥಳಕ್ಕೆ ಸರಕಿನ ಸಾಗಣೆಯು ರಾಜ್ಯದಲ್ಲಿನ ಯಾವ ಸ್ಥಳದಿಂದ ಪ್ರಾರಂಭವಾಗುತ್ತದೋ ಆ ಸ್ಥಳದಿಂದ ಸಾಧಾರಣವಾಗಿ ಸಾಗುವ ಮಾರ್ಗದಲ್ಲಿ ಇರುವಂಥ ಮೊದಲ ಚೆಕ್‌ಪೋಸ್ಟ್‌ನಲ್ಲಿ ಅಥವಾ ಸುಂಕದ ಕಟ್ಟೆಯಲ್ಲಿ ಸದರಿ ಚೆಕ್‌ಪೋಸ್ಟಿನ ಅಥವಾ ಸುಂಕದ ಕಟ್ಟೆಯ ಪ್ರಭಾರದಲ್ಲಿರುವ ಯಾವೊಬ್ಬ ಅಧಿಕಾರಿಯ ಅಥವಾ ಇದಕ್ಕಾಗಿಯೇ ರಾಜ್ಯ ಸರ್ಕಾರದಿಂದ ಪ್ರಾಧಿಕೃತನಾಗಬಹುದಾದ ಯಾವೊಬ್ಬ ಇತರ ಅಧಿಕಾರಿಯ ಎದುರಿಗೆ ವರದಿ ಮಾಡಿಕೊಳ್ಳತಕ್ಕದ್ದು ಮತ್ತು (ಎ) ಮತ್ತು (ಬಿ) ಖಂಡಗಳಲ್ಲಿ ಉಲ್ಲೇಖಿಸಲಾದ ದಸ್ತಾವೇಜುಗಳನ್ನು ಹಾಜರುಪಡಿಸತಕ್ಕದ್ದು ಮತ್ತು ಅದರ ಮೇಲೆ ಅಂಥ ಅಧಿಕಾರಿಯ ಮೊಹರನ್ನು ಪಡೆಯತಕ್ಕದ್ದು ಮತ್ತು ಮಾರಾಟದ ಬಿಲ್ಲಿಗೆ ಸಂಬಂಧಪಟ್ಟಂತೆ ಅದರ ಒಂದು ಪ್ರತಿಯನ್ನು ನೀಡತಕ್ಕದ್ದು ಮತ್ತು ರವಾನೆ ಚೀಟಿಗೆ ಸಂಬಂಧಪಟ್ಟಂತೆ ಮೂಲಪ್ರತಿಯೆಂದು ಗುರುತಿಸಲಾದ ಒಂದು ಪ್ರತಿಯನ್ನು ಅಂಥ ಅಧಿಕಾರಿಗೆ ನೀಡತಕ್ಕದ್ದು ಮತ್ತು ಇನ್ನೊಂದು ಪ್ರತಿಯನ್ನು ಸರಕುಗಳ ಸಾಗಣೆಯು ಕೊನೆಗೊಳ್ಳುವವರೆಗೆ ತನ್ನಲ್ಲಿ ಉಳಿಸಿಕೊಳ್ಳತಕ್ಕದ್ದು; ಮತ್ತು

(ಡಿ) ರಾಜ್ಯದ ಗಡಿಯನ್ನು ಪ್ರವೇಶಿಸಿದ ಮೇಲೆ, ಅಲ್ಲಿರುವ ಮೊದಲನೇ ಚೆಕ್‌ಪೋಸ್ಟ್ ಅಥವಾ ಸುಂಕದ ಕಟ್ಟೆಯಲ್ಲಿ ವರದಿ ಮಾಡಿಕೊಳ್ಳತಕ್ಕದ್ದು ಮತ್ತು ರಾಜ್ಯದ ಗಡಿಯನ್ನು ಬಿಡುವಾಗ ಕೊನೆಯಲ್ಲಿ ಸ್ಥಾಪನೆಗೊಂಡ ಚೆಕ್‌ಪೋಸ್ಟ್ ಅಥವಾ ಸುಂಕದ ಕಟ್ಟೆಯಲ್ಲಿ ವರದಿ ಮಾಡಿಕೊಳ್ಳತಕ್ಕದ್ದು ಮತ್ತು ಚೆಕ್‌ಪೋಸ್ಟ್‌ನ ಅಥವಾ ಸುಂಕದ ಕಟ್ಟೆಯ ಪ್ರಭಾರದಲ್ಲಿರುವ ಯಾವೊಬ್ಬ ಅಧಿಕಾರಿಯ ಅಥವಾ ಈ ಬಗ್ಗೆ ರಾಜ್ಯ ಸರ್ಕಾರದಿಂದ ಪ್ರಾಧಿಕೃತನಾಗಿರಬಹುದಾದ ಯಾವೊಬ್ಬ ಇತರೆ ಅಧಿಕಾರಿಯ ಎದುರಿಗೆ, ಸರಕುಗಳ ವಾಹನ ಅಥವಾ ನಾವೆ, ಹಡಗು ಅಥವಾ ಅಂಥದೇ ನೌಕೆಯಲ್ಲಿ ತೆಗೆದುಕೊಂಡು ಹೋಗುವ ಸರಕುಗಳಿಗೆ ಸಂಬಂಧಪಟ್ಟಂತೆ ನಿಯಮಿಸಬಹುದಾದಂತೆ ಅಂಥ ವಿವರಗಳನ್ನೊಳಗೊಂಡ ಒಂದು ಘೋಷಣಾ ಪತ್ರವನ್ನು ನೀಡತಕ್ಕದ್ದು; ಮತ್ತು

(ಇ) ಚೆಕ್‌ಪೋಸ್ಟ್ ಅಥವಾ ಸುಂಕದ ಕಟ್ಟೆಯ ಪ್ರಭಾರದಲ್ಲಿರುವ ಅಧಿಕಾರಿಯು ಅಥವಾ ಮೇಲೆ ಹೇಳಲಾದಂತೆ ಪ್ರಾಧಿಕೃತನಾದ ಅಧಿಕಾರಿಯು ಅಗತ್ಯಪಡಿಸಬಹುದಾದಷ್ಟು ಸಮಯದವರೆಗೆ ವಾಹನ ಅಥವಾ ನಾವೆ, ಹಡಗು ಅಥವಾ ಅಂಥದೇ ನೌಕೆಯಲ್ಲಿನ ಸರಕುಗಳನ್ನು ಪರೀಕ್ಷಿಸಲು ಮತ್ತು ಸರಕುಗಳನ್ನು ತೆಗೆದುಕೊಂಡು ಹೋಗುತ್ತಿರುವುದಕ್ಕೆ ಸಂಬಂಧಪಟ್ಟಂತೆ ಅಂಥ ಚಾಲಕನ ಅಥವಾ ಪ್ರಭಾರದಲ್ಲಿರುವ ಇತರ ವ್ಯಕ್ತಿಯ ಸ್ವಾಧೀನದಲ್ಲಿರುವ ಎಲ್ಲ ದಾಖಲೆಗಳನ್ನು ಪರಿಶೀಲಿಸಲು ಸಂದರ್ಭಾನುಸಾರ ವಾಹನ ಅಥವಾ ನಾವೆ, ಹಡಗು ಅಥವಾ ಅಂಥದೇ ನೌಕೆಯನ್ನು ನಿಲ್ಲಿಸತಕ್ಕದ್ದು ಮತ್ತು ಹಾಗೆ ಅಗತ್ಯಪಡಿಸಲಾದಲ್ಲಿ, ತನ್ನ ಹೆಸರು ಮತ್ತು ವಿಳಾಸ ಮತ್ತು ವಾಹನದ ಅಥವಾ ನಾವೆಯ, ಹಡಗಿನ ಅಥವಾ ಅಂಥದೇ ನೌಕೆಯ ಮಾಲೀಕನ ಹೆಸರು ಮತ್ತು ವಿಳಾಸವನ್ನು ನೀಡತಕ್ಕದ್ದು.

(3) ಚೆಕ್‌ಪೋಸ್ಟ್ ಅಥವಾ ಸುಂಕದ ಕಟ್ಟೆಯನ್ನು ಹೊರತುಪಡಿಸಿ ಇತರೆ ಯಾವುದೇ ಸ್ಥಳದಲ್ಲಿ, ಪ್ರಾಧಿಕೃತನಾದ ಅಧಿಕಾರಿಯು ಯಾವುದೇ ಸರಕು ವಾಹನವನ್ನು ತಡೆದು ನಿಲ್ಲಿಸಿದಾಗ, ಅಂಥ ಅಧಿಕಾರಿಯು, ಅವನು ಅವಶ್ಯಕವೆಂದು ಪರಿಗಣಿಸಿದಲ್ಲಿ, ಸರಕು ವಾಹನವನ್ನು ಹತ್ತಿರದಲ್ಲಿರುವ ಚೆಕ್‌ಪೋಸ್ಟ್ ಅಥವಾ ಪೊಲೀಸ್ ಠಾಣೆಗೆ ತೆಗೆದುಕೊಂಡು ಹೋಗುವಂತೆ ಅದರ ಮಾಲೀಕ ಅಥವಾ ಅದರ ಪ್ರಭಾರದಲ್ಲಿರುವ ವ್ಯಕ್ತಿಗೆ ಆದೇಶಿಸಬಹುದು ಮತ್ತು ಸರಕು ವಾಹನದ ಅಂಥ ಮಾಲೀಕ ಅಥವಾ ಪ್ರಭಾರದಲ್ಲಿರುವ ವ್ಯಕ್ತಿಯು ಅಂಥ ನಿರ್ದೇಶನವನ್ನು ಪಾಲಿಸತಕ್ಕದ್ದು.

XX XX XX

(12) (ಎ) ಚೆಕ್‌ಪೋಸ್ಟ್‌ನ ಅಥವಾ ಸುಂಕದ ಕಟ್ಟೆಯ ಪ್ರಭಾರದಲ್ಲಿರುವ ಅಧಿಕಾರಿ ಅಥವಾ ಯಾವೊಬ್ಬ ಇತರ ಅಧಿಕಾರಿಯು (2)ನೇ ಉಪ-ಪ್ರಕರಣದ ಉಪಬಂಧಗಳ ಯಾವುದೇ ಉಲ್ಲಂಘನೆಗೆ ಅಥವಾ ಪಾಲಿಸದಿರುವುದಕ್ಕೆ ಸಂಬಂಧಪಟ್ಟಂತೆ, ಸಾಕಷ್ಟು ಕಾರಣಗಳನ್ನು ಒದಗಿಸದಿದ್ದಾಗ ಈ ಮುಂದಿನಂತೆ ದಂಡವನ್ನು ವಿಧಿಸಬಹುದು, ಅದು,-

(i) ಈ ಅಧಿನಿಯಮದ ಅಡಿಯಲ್ಲಿ ನೋಂದಾಯಿತನಾದ ಒಬ್ಬ ವ್ಯಾಪಾರಿಯು ತಾನು ಸರಕುಗಳನ್ನು ಕಳುಹಿಸುವವನು ಅಥವಾ ಸರಕುಗಳನ್ನು ಪಡೆಯುವವನು ಎಂಬುದಾಗಿ ಅವನು ಒಪ್ಪಿದಲ್ಲಿ, (2)ನೇ ಉಪ-ಪ್ರಕರಣದ (ಸಿ) ಖಂಡದ ಅಥವಾ (ಡಿ) ಖಂಡದ ಉಲ್ಲಂಘನೆಯಲ್ಲಿ ಸಾಗಣೆಯಲ್ಲಿರುವ ಸರಕುಗಳಿಗೆ ಸಂಬಂಧಪಟ್ಟಂತೆ ವಿಧಿಸಬಹುದಾದ ದಂಡವು ಅವುಗಳಿಗೆ ವಿಧಿಸಬಹುದಾದ ತೆರಿಗೆ ಮೊಬಲಗಿಗಿಂತ ಕಡಿಮೆ ಇರತಕ್ಕದ್ದಲ್ಲ ಆದರೆ, ಅಂಥ ತೆರಿಗೆಯ ಮೊಬಲಗಿನ ಒಂದೂವರೆ ಪಟ್ಟನ್ನು ಮೀರತಕ್ಕದ್ದಲ್ಲ;

(ii) (1)ನೇ ಬಾಬಿನ ಅಡಿಯಲ್ಲಿ ಬರುವವುಗಳ ಹೊರತಾದ ಸಂದರ್ಭಗಳಲ್ಲಿ, ಇತರ ಸಂದರ್ಭಗಳಲ್ಲಿ, ವಿಧಿಸಬಹುದಾದ ದಂಡವು, ಸಾಗಣೆಯಲ್ಲಿರುವ ಸರಕುಗಳ ಸಂಬಂಧದಲ್ಲಿ ವಿಧಿಸಬಹುದಾದ ತೆರಿಗೆಯ ಮೊಬಲಗಿನ ಎರಡರಷ್ಟಕ್ಕೆ ಕಡಿಮೆ ಇರತಕ್ಕದ್ದಲ್ಲ, ಆದರೆ, ತೆರಿಗೆಯ ಮೊಬಲಗಿನ ಮೂರುಪಟ್ಟನ್ನು ಮೀರತಕ್ಕದ್ದಲ್ಲ.

(ಬಿ) ವಿಧಿಸಬಹುದಾದ ದಂಡದ ಮೊಬಲಗು, ಸರಕುಗಳ ಮೌಲ್ಯಕ್ಕಿಂತ ಹೆಚ್ಚಿನದ್ದಾಗಿದ್ದರೆ, ವಿಧಿಸಬಹುದಾದ ದಂಡದ ಮೊಬಲಗನ್ನು ಅಂಥ ಮೌಲ್ಯಕ್ಕೆ ಸೀಮಿತಗೊಳಿಸತಕ್ಕದ್ದು.

(ಸಿ) ಮೇಲಿನ (10)ನೇ ಉಪ-ಪ್ರಕರಣದ ಅಡಿಯಲ್ಲಿನ ವ್ಯವಹರಣೆಗಳಲ್ಲಿ, ವಿಧಿಸಲಾದ ದಂಡವನ್ನು ಸಂದಾಯ ಮಾಡದಿದ್ದಲ್ಲಿ, ಸಾಗಾಣಿಕೆದಾರ ಅಥವಾ ಸರಕು ರಕ್ಷಕ ಅಥವಾ ಸರಕು ವಾಹನಗಳ ಪ್ರಭಾರದಲ್ಲಿರುವ ವ್ಯಕ್ತಿಯು ಜಂಟಿಯಾಗಿ ಮತ್ತು ಪ್ರತ್ಯೇಕವಾಗಿ ಸಂದಾಯ ಮಾಡಲು ಬದ್ಧನಾಗತಕ್ಕದ್ದು.

(ಡಿ) ಈ ಉಪ-ಪ್ರಕರಣದ ಅಡಿಯಲ್ಲಿನ ಯಾವುದೇ ದಂಡವನ್ನು ವಿಧಿಸುವುದಕ್ಕೆ ಮೊದಲು, ಅಧಿಕಾರಿಯು, ಸರಕುಗಳ ವಾಹನ ಅಥವಾ ನಾವೆ, ಹಡಗು ಅಥವಾ ಅಂಥದೇ ನೌಕೆಯ ಪ್ರಭಾರದಲ್ಲಿರುವ ವ್ಯಕ್ತಿಗೆ, ಸಾಗಾಣಿಕೆದಾರನಿಗೆ, ಸರಕು ರಕ್ಷಕನಿಗೆ ಅಥವಾ ಸಂದರ್ಭಾನುಸಾರ, ಈ ಅಧಿನಿಯಮದ ಅಡಿಯಲ್ಲಿ ನೋಂದಾಯಿತವಾದ ವ್ಯಾಪಾರಿಗೆ, ಅಹವಾಲು ಹೇಳಿಕೊಳ್ಳಲು ಸೂಕ್ತ ಅವಕಾಶವನ್ನು ನೀಡತಕ್ಕದ್ದು.

XX XX XX

**54. ರಾಜ್ಯದ ಮೂಲಕ ರಸ್ತೆ ಮಾರ್ಗವಾಗಿ ಸರಕುಗಳ ಸಾಗಣೆ ಮತ್ತು ಸಾಗಣೆ ಪಾಸ್ ನೀಡುವುದು.**- (1) ಈ ಅಧಿನಿಯಮದ ಅಡಿಯಲ್ಲಿ ತೆರಿಗೆಗೆ ಗುರಿಯಾಗುವ ಸರಕುಗಳನ್ನು ಕೊಂಡೊಯ್ಯುತ್ತಿರುವ ಒಂದು ವಾಹನವು,

(ಎ) ರಾಜ್ಯದ ಹೊರಗಿನ ಯಾವುದೇ ಸ್ಥಳದಿಂದ ಮತ್ತು ರಾಜ್ಯದ ಹೊರಗಿನ ಯಾವುದೇ ಸ್ಥಳಕ್ಕಾಗಿ ರಾಜ್ಯದ ಮೂಲಕ ಹಾದು ಹೋದರೆ; ಅಥವಾ

(ಬಿ) ದೇಶದ ಹೊರಗಿನ ಯಾವುದೇ ಸ್ಥಳದಿಂದ ರಾಜ್ಯಕ್ಕೆ ಆಮದು ಮಾಡಿಕೊಂಡರೆ ಮತ್ತು ಅಂಥ ಸರಕುಗಳನ್ನು ರಾಜ್ಯದ ಹೊರಗಿನ ಯಾವುದೇ ಸ್ಥಳಕ್ಕೆ ಕೊಂಡೊಯ್ದರೆ;

– ಅಂಥ ವಾಹನದ ಚಾಲಕ ಅಥವಾ ಅದರ ಪ್ರಭಾರದಲ್ಲಿರುವ ಯಾವೊಬ್ಬ ಇತರ ವ್ಯಕ್ತಿಯು ಅವಶ್ಯಕವಿರುವ ಮಾಹಿತಿಯನ್ನು ಒದಗಿಸತಕ್ಕದ್ದು ಮತ್ತು ನಿಯಮಿಸಬಹುದಾದ ಅಂಥ ವಿವರಗಳನ್ನು ಒಳಗೊಂಡ ಒಂದು ಸಾಗಣೆ ಪಾಸನ್ನು ದ್ವಿಪ್ರತಿಯಲ್ಲಿ, ಅವನು ರಾಜ್ಯದೊಳಗೆ ಪ್ರವೇಶಿಸಿದ ತರುವಾಯ ಅಥವಾ ಸಂದರ್ಭಾನುಸಾರ ರಾಜ್ಯದಿಂದ ಸಾಗಣೆಯು ಪ್ರಾರಂಭಗೊಂಡ ತರುವಾಯ ಮೊದಲನೇ ಚೆಕ್‌ಪೋಸ್ಟ್ ಅಥವಾ ಸುಂಕದ ಕಟ್ಟೆಯ ಅಥವಾ ಸರಕು ವಾಹನವು ರಾಜ್ಯದೊಳಕ್ಕೆ ಪ್ರವೇಶಿಸಿದ ತರುವಾಯ ತಡೆದು ನಿಲ್ಲಿಸಿದ ಮೇಲೆ ಅಥವಾ ಸಂದರ್ಭಾನುಸಾರ ಸಾಗಣೆ ಪ್ರಾರಂಭಗೊಂಡ ತರುವಾಯ, 52ನೇ ಪ್ರಕರಣದ (3)ನೇ ಉಪಪ್ರಕರಣದ ಉದ್ದೇಶಗಳಿಗಾಗಿ ಪ್ರಾಧಿಕೃತನಾದ ಅಧಿಕಾರಿಯಿಂದ ಪಡೆದುಕೊಳ್ಳತಕ್ಕದ್ದು.

XX XX XX

**72. ವಿವರ ಪಟ್ಟಿಗಳಿಗೆ ಮತ್ತು ತೆರಿಗೆ ನಿರ್ಧರಣಕ್ಕೆ ಸಂಬಂಧಿಸಿದ ದಂಡಗಳು.**– (1) XX

(2) ಒಬ್ಬ ವ್ಯಾಪಾರಿಯು, ಯಾವುದೇ ನಿಯಮಿಸಲಾದ ತೆರಿಗೆ ಅವಧಿಗಾಗಿ ಒಂದು ವಿವರ ಪಟ್ಟಿಯನ್ನು ಸಲ್ಲಿಸಿದ್ದು, ಅದು ಅವನ ತೆರಿಗೆ ಬದ್ಧತೆಯನ್ನು ಕಡಿಮೆ ತೋರಿಸಿದರೆ ಅಥವಾ ಅವನ ವಾಸ್ತವಿಕ ತೆರಿಗೆ ಬದ್ಧತೆಯ ಅಥವಾ ಸಂದರ್ಭಾನುಸಾರ ಅವನ ವಾಸ್ತವಿಕ ತೆರಿಗೆ ಜಮೆಯ ಶೇಕಡ ಐದಕ್ಕಿಂತ ಹೆಚ್ಚು ತೆರಿಗೆ ಜಮೆಗೆ ಅವನ ಹಕ್ಕುದಾರಿಕೆಯನ್ನು ಹೆಚ್ಚಿಗೆ ತೋರಿಸಿದರೆ, ಅವನಿಗೆ ದಂಡ ವಿಧಿಸುವಿಕೆಯ ವಿರುದ್ಧ ಲಿಖಿತದಲ್ಲಿ ಕಾರಣ ತೋರಿಸಲು ಅವಕಾಶ ನೀಡಲಾದ ತರುವಾಯ, ಕಡಿಮೆ ಅಥವಾ ಹೆಚ್ಚಿಗೆ ತೋರಿಸಿದ ಅಂಥ ತೆರಿಗೆ ಮೊಬಲಗಿನ ಶೇಕಡಾ ಹತ್ತಕ್ಕೆ ಸಮನಾದ ದಂಡಕ್ಕೆ ಬದ್ಧನಾಗಿರತಕ್ಕದ್ದು.

XX XX XX

**ಮೂರನೇ ಅನುಸೂಚಿ**

**ಶೇಕಡಾ ನಾಲ್ಕರ ದರದಲ್ಲಿ ತೆರಿಗೆಗೆ ಗುರಿಯಾಗತಕ್ಕ ಸರಕುಗಳು**

**[4(1)(ಎ)(ii)ನೇ ಪ್ರಕರಣ]**

| [ಪ್ರಕರಣ 4(1) (ಸಿ) ಕ್ರಮ ಸಂಖ್ಯೆ | ಕಾಮಗಾರಿಗಳ ಕರಾರಿನ ವಿವರಣೆ | ತೆರಿಗೆಯ ದರ |
|---|---|---|
| 1 | 2 | 3 |
| 1. | ಕೈಯಿಂದ ನಡೆಸದಿರುವ ಅಥವಾ ಪ್ರಾಣಿಗಳಿಂದ ಎಳೆಸದಿರುವ ಕೃಷಿ ಉಪಕರಣಗಳು | |
| 2. | ಹಾರು ಬೂದಿ (ಫ್ಲೈ ಆ್ಯಷ್) ಇಟ್ಟಿಗೆಗಳು, ರಿಫ್ಯಾಕ್ಟರಿ ಇಟ್ಟಿಗೆಗಳು ಮತ್ತು ಅಂತಹವುಗಳನ್ನು ಒಳಗೊಂಡಂತೆ ಎಲ್ಲಾ ಬಗೆಯ ಇಟ್ಟಿಗೆಗಳು, ಡಾಂಬರು ಲೇಪಿತ ಮೇಲ್ಛಾವಣಿ ಹಾಳೆಗಳು, ಮಣ್ಣಿನ ಹೆಂಚುಗಳು | |

XX XX XX

**ಆರನೇ ಅನುಸೂಚಿ**

**[ಪ್ರಕರಣ 4(1) (ಸಿ)]**

| ಕ್ರಮ ಸಂಖ್ಯೆ | ಕಾಮಗಾರಿಗಳ ಕರಾರಿನ ವಿವರಣೆ | ತೆರಿಗೆಯ ದರ |
|---|---|---|
| 1 | 2 | 3 |
| 1 | ಸರಕುಗಳ ಬಾಟ್ಲಿಂಗ್, ಕ್ಯಾನಿಂಗ್ ಮತ್ತು ಪ್ಯಾಕಿಂಗ್ | ಶೇಕಡಾ ನಾಲ್ಕು |
| 2 | ಬಟ್ಟೆಗಳಿಗೆ ಬಣ್ಣ ಹಾಕುವುದು ಮತ್ತು ಪ್ರಿಂಟ್ ಮಾಡುವುದು | ಶೇಕಡಾ ನಾಲ್ಕು |
| 3 | ಇಲೆಕ್ಟ್ರೋ ಪ್ಲೇಟಿಂಗ್, ಇಲೆಕ್ಟ್ರೋ ಗಾಲ್ವನೈಸಿಂಗ್, ಆ್ಯನೋಡೈಜಿಂಗ್ ಮತ್ತು ಅಂಥವೇ | ಶೇಕಡಾ ನಾಲ್ಕು |
| 4 | ಕಬ್ಬಿಣದ ಆಸರೆ ಕಟ್ಟುಗಳು, ಉದ್ದಸರಗಳು, ಇತ್ಯಾದಿಗಳ ನಿರ್ಮಾಣ ಸರಬರಾಜು ಮತ್ತು ಕಟ್ಟುವಿಕೆ ಒಳಗೊಂಡು ರಚನಾ ಕಾಮಗಾರಿಗಳ ನಿರ್ಮಾಣ ಮತ್ತು ಕಟ್ಟುವಿಕೆ, | ಶೇಕಡಾ ನಾಲ್ಕು |
| 5 | ಮೂರನೇ ಅನುಸೂಚಿಯಲ್ಲಿನ 20ನೇ ಕ್ರಮಸಂಖ್ಯೆಯಲ್ಲಿ ನಿರ್ದಿಷ್ಟಪಡಿಸಿದ ಬಂಡವಾಳ ಸರಕುಗಳ ನಿರ್ಮಾಣ ಅಥವಾ ಸರಬರಾಜು ಮತ್ತು ಸ್ಥಾಪನೆ | ಶೇಕಡಾ ನಾಲ್ಕು |
| 6 | ಪೌಡರ್ ಕೋಟಿಂಗನ್ನು ಒಳಗೊಂಡಂತೆ ಲ್ಯಾಮಿನೇಷನ್, ರಬ್ಬರೈಸೇಷನ್, ಕೋಟಿಂಗ್ ಮತ್ತು ಅಂಥವೇ ಸಂಸ್ಕರಣ | ಶೇಕಡಾ ನಾಲ್ಕು |

| ಕ್ರಮ ಸಂಖ್ಯೆ | ಕಾಮಗಾರಿಗಳ ಕರಾರಿನ ವಿವರಣೆ | ತೆರಿಗೆಯ ದರ |
|---|---|---|
| 1 | 2 | 3 |
| 7 | ಅಮೂಲ್ಯ ಅಥವಾ ಅರೆ ಅಮೂಲ್ಯ ಹರಳುಗಳನ್ನು ಹುದುಗಿಸಿರಲಿ ಅಥವಾ ಹುದುಗಿಸಿರದಿರಲಿ ಚಿನ್ನದ, ಬೆಳ್ಳಿಯ ಮತ್ತು ಇತರೆ ಅಮೂಲ್ಯ ಲೋಹದ ಒಡವೆಗಳು ಮತ್ತು ವಸ್ತುಗಳ ತಯಾರಿಕೆ ಅಥವಾ ಸಂಸ್ಕರಣ ಮತ್ತು ಸರಬರಾಜು. | ಶೇಕಡಾ ನಾಲ್ಕು |
| 8 | ಮುದ್ರಣ ಮತ್ತು ಬ್ಲಾಕ್ ತಯಾರಿಕೆ | ಶೇಕಡಾ ನಾಲ್ಕು |
| 9 | ಫೋಟೋಗ್ರಾಫ್ಸ್, ಫೋಟೋ ಪ್ರಿಂಟ್ಸ್ ಮತ್ತು ಫೋಟೋ ನೆಗೆಟಿವ್‌ಗಳ ಸಂಸ್ಕರಣ ಮತ್ತು ಸರಬರಾಜು. | ಶೇಕಡಾ ನಾಲ್ಕು |
| 10 | ಸಿನಿಮಾಟೋಗ್ರಾಫಿಕ್ ಫಿಲ್ಮ್‌ಗಳ ಸಂಸ್ಕರಣ ಮುದ್ರಣ ಮತ್ತು ಸರಬರಾಜು. | ಶೇಕಡಾ ನಾಲ್ಕು |
| 11 | ಕಂಪ್ಯೂಟರ್ ಸಾಫ್ಟ್‌ವೇರ್ ಪ್ರೋಗ್ರಾಮಿಂಗ್ ಮತ್ತು ಅದನ್ನು ಒದಗಿಸುವುದು | ಶೇಕಡಾ ನಾಲ್ಕು |
| 12 | ಪ್ಲಂಬಿಂಗ್‌ಗಾಗಿ, ಚರಂಡಿಗಾಗಿ ಮತ್ತು ಅಂಥ ಕಾರ್ಯಗಳಿಗಾಗಿ ಹೊರತು ಇತರೆ ಉದ್ದೇಶಗಳಿಗಾಗಿ ಸ್ಟೀಲ್ ಪೈಪ್‌ಗಳನ್ನು ಒದಗಿಸುವುದು ಮತ್ತು ಜೋಡಿಸುವುದು. | ಶೇಕಡಾ ನಾಲ್ಕು |
| 13 | ಎಲೆಕ್ಟ್ರಿಕಲ್ ಮೋಟಾರುಗಳ ರೀವೈಂಡಿಂಗ್ | ಶೇಕಡಾ ನಾಲ್ಕು |
| 14 | ಮೂರನೇ ಅನುಸೂಚಿಯ 53ನೇ ಕ್ರಮ ಸಂಖ್ಯೆಯಲ್ಲಿ ನಿರ್ದಿಷ್ಟಪಡಿಸಿದ ಟೆಲಿಕಮ್ಯೂನಿಕೇಷನ್ ಸಾಧನ ಸಲಕರಣೆಗಳೂ ಸೇರಿದಂತೆ ಐ.ಟಿ. ಉತ್ಪನ್ನಗಳ ಸರ್ವೀಸ್ ಮತ್ತು ನಿರ್ವಹಣೆ | ಶೇಕಡಾ ನಾಲ್ಕು |
| 15 | ನೂಲಿನ ಸೈಜಿಂಗ್ ಮತ್ತು ಬಣ್ಣಹಾಕುವುದು | ಶೇಕಡಾ ನಾಲ್ಕು |
| 16 | ಎಲೆಕ್ಟ್ರಿಕಲ್ ಟ್ರಾನ್ಸ್‌ಮಿಷನ್ ಟವರ್‌ಗಳ ಸರಬರಾಜು ಮತ್ತು ನಿರ್ಮಾಣ | ಶೇಕಡಾ ನಾಲ್ಕು |
| 17 | ಷಾಬಾದ್ ಸ್ಲ್ಯಾಬುಗಳು ಮತ್ತು ಕಲ್ಲುಗಳ ಸರಬರಾಜು ಮತ್ತು ಜೋಡಣೆ | ಶೇಕಡಾ ನಾಲ್ಕು |
| 18 | ಸೆಂಟ್ರಿಫ್ಯುಗಲ್ ಮನೋಬ್ಲಾಕ್ ಮತ್ತು ಸಬ್‌ಮರ್ಸಿಬಲ್ ಪಂಪ್ ಸೆಟ್ಟುಗಳ ಸರಬರಾಜು ಮತ್ತು ಜೋಡಣೆ | ಶೇಕಡಾ ನಾಲ್ಕು |
| 19 | ದಪ್ಪ ಜಲ್ಲಿ ಕಲ್ಲುಗಳ ಸರಬರಾಜು ಮತ್ತು ಹರಡುವುದು. | ಶೇಕಡಾ ನಾಲ್ಕು |
| 20 | ಪುನರ್ನವೀಕರಿಸಬಹುದಾದ ಊರ್ಜಶಕ್ತಿ ಉಪಕರಣಗಳ ಸರಬರಾಜು, ನಿರ್ಮಾಣ, ಸ್ಥಾಪನೆ ಮತ್ತು ಕಾರ್ಯಚಾಲನೆ | ಶೇಕಡಾ ನಾಲ್ಕು |
| 21 | ಟೈರು ರಿಟ್ರೆಡ್ಡಿಂಗ್ | ಶೇಕಡಾ ನಾಲ್ಕು |
| 22 | ಮೇಲಿನ ಎರಡು ಅಥವಾ ಹೆಚ್ಚಿನ ಪ್ರವರ್ಗಗಳನ್ನು ಒಳಗೊಂಡ ಸಂಯೋಜಿತ ಕರಾರುಗಳು | ಶೇಕಡಾ ನಾಲ್ಕು |
| 23 | ಮೇಲಿನ ಒಂದು ಅಥವಾ ಹೆಚ್ಚಿನ ಪ್ರವರ್ಗಗಳೊಂದಿಗೆ ಸಂಯೋಜಿತ ಕರಾರುಗಳೂ ಸೇರಿದಂತೆ ಮೇಲಿನ ಯಾವುದೇ ಪ್ರವರ್ಗಗಳಲ್ಲಿ ನಿರ್ದಿಷ್ಟ ಪಡಿಸದಿರುವ ಇತರ ಎಲ್ಲಾ ಕಾಮಗಾರಿಗಳ ಕರಾರು. | ಶೇಕಡಾ ಹನ್ನೆರಡುವರೆ |

**ವಿವರಣೆ:** ಈ ಅನುಸೂಚಿಯಲ್ಲಿನ ಯಾವುದೇ ಕ್ರಮಸಂಖ್ಯೆಯಲ್ಲಿ ನಿರ್ದಿಷ್ಟಪಡಿಸಿದ ಕಾಮಗಾರಿಗಳ ಕರಾರು ಅಭಿವೃದ್ಧಿ, ಮಾರ್ಪಾಟುಗಳು ಅಥವಾ ದುರಸ್ತಿಗಳನ್ನು ಮಾಡುವುದಕ್ಕಾಗಿನ ಕಾಮಗಾರಿ ಕರಾರುಗಳನ್ನು ಒಳಗೊಳ್ಳತಕ್ಕದ್ದು.

XX XX XX

**KARNATAKA LEGISLATIVE ASSEMBLY**
**THIRTEENTH LEGISLATIVE ASSEMBLY**
**FIFTH SESSION**

## THE KARNATAKA VALUE ADDED TAX (AMENDMENT) BILL, 2010
## (L.A. Bill No. 10 of 2010)

A Bill further to amend the Karnataka Value Added Tax Act, 2003.

Whereas it is expedient further to amend the Karnataka Value Added Tax Act, 2003 (Karnataka Act 32 of 2004) for the purposes hereinafter appearing;

Be it enacted by the Karnataka State Legislature in the Sixty first year of the Republic of India, as follows.-

**1. Short title and commencement.-** (1) This Act may be called the Karnataka Value Added Tax ( Amendment) Act, 2010.

(2) It shall come into force with effect from the First day of April, 2010.

**2. Amendment of section 4.-** In the Karnataka Value Added Tax Act, 2003 (Karnataka Act 32 of 2004) (hereinafter referred to as the principal Act), in section 4,-

(i) in sub-section (1),-

(a) in clause (a), in sub-clause (ii), after the words "four per cent", the words "in respect of goods specified in serial number 30 and five per cent in respect of other goods" shall be inserted;

(b) for clause (b), the following shall be substituted, namely:-

"(b) in respect of,-

(i) cigarettes, cigars, gutkha and other manufactured tobacco at the rate of fifteen per cent;

(ii) other goods at the rate of thirteen and one half per cent."

(ii) after sub-section (3), the following shall be inserted, namely:-

"(3-A) Any notification issued under sub-section (3), shall be valid until it is cancelled or varied, notwithstanding that the tax payable in respect of any such goods is modified by amendment to this Act."

(iii) in sub-section (4), after the words "Third Schedule", the words "or any other goods" shall be inserted;

(iv) after sub-section (4), the following shall be inserted, namely:-

"(5) Notwithstanding anything contained in sub-section (1), a registered dealer shall be liable to pay tax on the sale of cigarettes, cigars, gutkha and other manufactured tobacco, on the maximum retail price indicated on the label of the container or pack thereof, after reducing from such maximum retail price an amount equal to the tax payable, where the total amount payable to the dealer as the consideration for sale of such goods exceeds five hundred rupees or any other higher amount as may be notified by the Commissioner.

(6) Where tax in respect of his purchase of goods is collected in accordance with sub-section (5),-

(a) a registered dealer whose sale of such goods is not liable to tax under sub-section (5), shall be eligible for refund or adjustment of any amount of tax collected on his purchase, which is in excess of the tax payable on his turnover relating to sale of such goods, and the burden of proving that the tax has been collected and paid in accordance with the said sub-section shall be on the dealer;

(b) a person who is not a dealer liable to get registered under the Act, may claim refund of any amount paid by the selling dealer in excess of the tax payable on the consideration paid by him to such dealer in such manner and subject to such conditions as may be prescribed."

**3. Amendment of section 5.-** In section 5 of the principal Act, after sub-section (1), the following shall be inserted, namely:-

"(1-A) Any notification issued under sub-section (1), shall be valid until it is cancelled or varied, notwithstanding that the tax payable in respect of such goods is modified by amendment to this Act."

**4. Amendment of section 18.-** In section 18 of the principal Act, in sub-section (2), for the words "two lakh rupees", the words "five lakh rupees" shall be substituted.

**5. Amendment of section 18-A.-** In section 18-A of the principal Act, in sub-section (5), for the words "provisions of this sub-section", the words, brackets and figure "provisions of sub-section (4)" shall be substituted.

**6. Amendment of section 22.-** In section 22 of the principal Act,-

(i) sub-section (1) shall be omitted;

(ii) in sub-section (2), for the words "two lakh rupees", the words "five lakh rupees", shall be substituted;

(iii) in sub-section (3), for the words "fifteen thousand rupees", the words "forty thousand rupees", shall be substituted.

**7. Amendment of section 27.-** In section 27 of the principal Act, in sub-section (1), in clause (c), for the words "two lakh rupees", the words "five lakh rupees" shall be substituted.

**8. Amendment of section 31.-** In section 31 of the principal Act, in sub-section (4),- (i) for the words "forty lakh rupees", the words "sixty lakh rupees" shall be substituted;

(ii) the following proviso shall be inserted, namely:-

"Provided that every dealer whose total turnover for the year ending Thirty First day of March, 2010 exceeds forty lakh rupees shall have his accounts audited."

**9. Amendment of section 35.-** In section 35 of the principal Act, in sub-section (1), the following proviso shall be inserted, namely:-

"Provided that the specified class of dealers as may be notified by the Commissioner shall furnish particulars for preparation of the return in the prescribed form or submit the return in the prescribed form, electronically through internet in the manner specified in the said notification:

Provided further that the specified class of dealers as may be notified by the Commissioner shall pay tax payable on the basis of the return, by electronic remittance through internet in the manner specified in the said notification."

**10. Amendment of section 53.-** In section 53 of the principal Act,-

(i) in sub-section (2),-

(a) in clause (c), after the words "the Government", the words "or the Commissioner", shall be inserted;

(b) in clause (d), after the words "the Government", the words "or the Commissioner", shall be inserted;

(ii) after sub-section(2), the following shall be inserted, namely:-

"(2-A) Notwithstanding anything contained in clause (c) of sub-section (2), the owner or person in charge of the goods vehicle carrying goods of any specified class of goods or any specified class of dealers or as a result of any specified class of transactions as may be notified by the Commissioner,

(a) shall report at the first check post or barrier situated on the route ordinarily taken from the place in the State, from which the movement of goods commences, to its destination; and

(b) shall produce proof of entering in the website, particulars of the goods carried by the consignor or consignee of the goods as may be specified in the notification, before the officer specified in sub-section (2); and

(c) on such production, the officer may allow the goods vehicle to pass through.

(2-B) Where the officer in charge of the check post or barrier, or the officer empowered under sub-section (2), finds that there is any contravention of or non-compliance with, the provisions of clause (a) or that the particulars as specified under clause (b) of sub-section (2-A) have not been entered or the particulars entered are incorrect and incomplete and for which sufficient cause is not furnished, he shall proceed to levy penalty as specified under sub-section (12). "

(iii) in sub-section (3), the words "nearest check post or police station", the words "nearest check post or office of the department of Commercial Taxes or police station or any other place as may be notified by the Commissioner", shall be substituted.

**11. Amendment of section 54.-** In section 54 of the principal Act, in sub-section (1), for the words, figures and brackets "sub-section (3) of Section 52", the word and figures "section 53", shall be and shall always be deemed to have been substituted.

**12. Insertion of new section 60.-** After section 59 of the principal Act, the following shall be inserted, namely:-

**"60. Clarification and Advance Rulings.-** (1) The Commissioner may constitute an 'Authority for Clarification and Advance Rulings', consisting of atleast three Additional Commissioners, to clarify the rate of tax in respect of any goods or the exigibility to tax of any transaction or eligibility of deduction of input tax or liability of deduction of tax at source under the Act, in respect of any case or class of cases as the Commissioner may specify.

(2) Any registered dealer seeking clarification or advance ruling under this section, shall make an application to the Authority in such form, accompanied by proof of payment of such fee, paid in such manner as may be prescribed.

(3) No officer or any other authority of the Department or the Appellate Tribunal shall proceed to decide any issue in respect of which an application has been made by an applicant under this Section.

(4) The order of the authority shall be binding, only on the applicant who seeks clarification and only in respect of the goods or transaction in relation to which a clarification is sought and also only in the proceedings before the officers of the department (other than the Commissioner) and the Appellate Tribunal, relating to such applicant.

(5) The order of Authority under this Section shall be binding as aforesaid unless there is a change in law or facts on the basis of which the order was passed.

(6) Where the authority finds, on a representation made to it by any officer or otherwise, that an order passed by it was obtained by the applicant by fraud or mis-representation of facts, it may, by order, declare such order to be void ab initio and thereupon all the provisions of this Act shall apply to the applicant as if such order had never been made.

(7) Subject to the provisions of sub-section (2) of section 64 and section 66, every order passed under this section shall be final."

**13. Amendment of section 72.-** In section 72 of the principal Act, in sub-section (2), after the words "tax period furnishes", the words "particulars for preparation of a return or furnishes" shall be inserted.

**14. Amendment of the Third Schedule.-** In the Third Schedule to the principal Act, in the heading, the words "GOODS TAXABLE AT FOUR PER CENT" shall be omitted.

**15. Amendment of the Sixth Schedule.-** In the Sixth Schedule to the principal Act, in column 3,-

(i) in the entries relating to serial numbers 1 to 6, 8 to 11 and 13 to 22, for the words "Four per cent" wherever they occur, the words "Five per cent" shall be substituted;

(ii) in the entries relating to serial number 23, for the words "Twelve and one half per cent", the words "Thirteen and one half per cent" shall be substituted.

**STATEMENT OF OBJECTS AND REASONS**

It is considered necessary to amend the Karnataka Value Added Tax Act, 2003 to give effect to the proposals made in the Budget and matters connected therewith and specifically to,

(i) provide for optional tax payment scheme on any goods on the basis of their maximum retail price to simplify maintenance of accounts and tax compliance;

(ii) provide for levy of tax on tobacco products on the basis of their maximum retail price so as to ensure payment of tax on value addition done by the retailers who do not get registered;

(iii) provide for constitution of Authority for Clarification and Advance Rulings so as to simplify tax compliance and avoid disputes;

(iv) empower the Commissioner of Commercial Taxes to notify the class of dealers to whom electronic filing of returns and payment of tax would be mandatory so as to ensure remittance of the tax due to the Government without any delay;

(v) empower the Commissioner of Commercial Taxes to notify the officers empowered to intercept and inspect goods vehicles;

(vi) empower the Commissioner of Commercial Taxes to notify the website in which particulars in respect of goods carried in a goods vehicle shall be entered into so as to expedite inspection of such goods vehicle at the check post and other places;

(vii) empower the Commissioner of Commercial Taxes to notify the place to which the owner or person-in-charge of the goods vehicle could be directed to take the goods vehicle on its interception at places other than a check post or barrier for its inspection;

(viii) provide for levy of penalty for furnishing of incorrect particulars for the preparation of a return.

Certain consequential and incidental amendments and other amendments to rationalise certain current provision are also made.

Hence the Bill.

**FINANCIAL MEMORANDUM**

There is no extra expenditure involved by the proposed measure.

**MEMORANDUM REGARDING DELEGATED LEGISLATION**

**CLAUSE 2-** Sub-section (5) to section 4 sought to be introduced under Clause 2 (iii) empowers the Commissioner of Commercial Taxes to notify the price of tobacco products in excess of five hundred rupees, on the sale of which tax should be paid on the basis of their maximum retail price.

**CLAUSE 9-** Provisos sought to be inserted in sub-section (1) of section 35 under Clause 9 empower the Commissioner of Commercial Taxes to notify the class of registered dealers required to file returns in electronic form and pay tax electronically.

**CLAUSE 10(i)** Amendment sought to be made in sub-section (2) of Section 53 under clause 10(i) empowers the Commissioner of Commercial Taxes to notify the officers empowered to intercept and inspect goods vehicles.

**CLAUSE 10(ii)-** Sub-section (2-A) sought to be inserted in Section 53 under Clause 10(ii) empowers the Commissioner of Commercial Taxes to notify the website in which the consignor or consignee may enter the particulars of goods belonging to them being carried in a goods vehicle passing through a check post in the State and the manner in which such entry should be made.

**CLAUSE 10(iii)-** Amendment sought to be made in sub-section (3) of Section 53 under clause 10(iii) empowers the Commissioner of Commercial Taxes to notify the place to which the owner or person-in-charge of the goods vehicle could be directed to take the goods vehicle on its interception at places other than a check post or barrier for its inspection.

**CLAUSE 12-** Sub-section (1) of new Section 60 sought to be inserted under clause 12 empowers the Commissioner of Commercial Taxes to notify the constitution of an Authority for Clarification and Advance Rulings.

The proposed delegation of Legislative power is normal in character.

**B.S.YEDDYURAPPA**
Chief Minister and
Minister for Finance

**S.B.PATIL**
Secretary
Karnataka Legislative Assembly

**EXTRACT OF THE KARNATAKA VALUE ADDED TAX ACT, 2003 (KARNATAKA ACT NO. 32 OF 2004)**

XXXX

**4. Liability to tax and rates thereof.-** (1) Every dealer who is or is required to be registered as specified in Sections 22 and 24, shall be liable to pay tax, on his taxable turnover,

(a) in respect of goods mentioned in,-

(i) Second Schedule, at the rate of one per cent,

(ii) Third Schedule, at the rate of four per cent, and

(iii) Fourth Schedule, at the rate of twenty per cent.

(b) in respect of other goods, at the rate of twelve and one half per cent.

XXXX

(3) The State Government may, by notification, reduce the tax payable under sub-section (1) in respect of any goods.

(4) Notwithstanding anything contained in sub-section (1), subject to such conditions as may be prescribed, a registered dealer, if he so elects, may pay tax on the sale of goods specified in serial number 60 of the Third Schedule, on the maximum retail price indicated on the label of the container or pack thereof.

XXXX

**5. Exemption of tax.-** (1)Goods specified in the First Schedule and any other goods as may be specified by a notification by the State Government shall be exempt from the tax payable under this Act.

XXXX

**18.Deduction of tax at source in the case of canteens.-** (1) Notwithstanding anything contained in this Act, a factory or other industrial concern or any other establishment, in which a canteen or cafeteria or restaurant or other similar facility is run, through a dealer, as an amenity provided for the employees of such factories or concerns or establishments, shall deduct out of any amounts payable by them to such dealer as their contribution by whatever name called, in respect of sale of articles of food and drinks to their employees, an amount at the rate of four percent of the aggregate of the sale prices received or receivable by such dealer from the employees and contribution paid or payable by such factories or concerns or establishments to such dealer.

(2) No deduction shall be made under sub-section (1) if the aggregate of the sale prices received or receivable by and contribution paid or payable to such dealer in respect of sale of articles of food and drinks to the employees is less than two lakh rupees in a year.

